ಕನ್ನಡ

# ಹೂಮಾಲೆ

(ಪದ್ಯ ಸಂಕಲನ)

**
*

ಸಂಪಾದಕರು:
ಪ್ರೊ. ಡಿ. ಕೆ. ಭೀಮಸೇನರಾವ್, ಎಂ. ಎ.



ಸತ್ಯಾಶ್ರಯ ಪ್ರಕಾಶನ ಮಂದಿರ
ಹೈದರಾಬಾದು.

CHECKED 1956

# ಸಂಪಾದಕರ ಮಾತು

ಕನ್ನಡದ ಉತ್ತಮ ಕವಿಗಳ ಕೃತಿಗಳಿಂದ ಉತ್ತಮವಾದ ಭಾಗವನ್ನು ಇಲ್ಲಿ ಸಂಗ್ರಹಿಸಿದೆ. ಕನ್ನಡದ ಉತ್ತಮ ಕಾವ್ಯಭಾಗ ಒಂದೇ ಎಡೆಯಲ್ಲಿ ಓದಿ ಕಾವ್ಯಸ್ವಾರಸ್ಯವನ್ನು ಆಸ್ವಾದಿಸುವುದರಲ್ಲಿ ಇ ವಿದ್ಯಾರ್ಥಿಗಳಿಗೂ, ಸಾಮಾನ್ಯ ಜನರಿಗೂ ಸಹಾಯವಾಗಲೆಂದು ಸಿದೆ. ಕವಿಪರಿಚಯವನ್ನೂ ಸಂದರ್ಭಸೂಚಿಯನ್ನೂ ಗ್ರಂಥದ ಪರಿಶಿ ಕೊಡಲಾಗಿದೆ. ವಾಚಕರು ಪದ್ಯವನ್ನು ಓದುವುದಕ್ಕೆ ಮುಂಚೆ ಅ ವಿಷಯವಾಗಿ ಕೊಟ್ಟ ಟಿಪ್ಪಣಿಯನ್ನು ಪರಿಶಿಷ್ಟದಲ್ಲಿ ಓದಿಕೊಳ್ಳಬೇಕು.

ಸಾಮಾನ್ಯವಾಗಿ ಕವಿಗಳ ಕಾಲಾನುಕ್ರಮದ ದೃಷ್ಟಿಯಿಂದ ಳನ್ನು ಕೊಡಲಾಗಿದೆ. ಕವಿಚರಿತ್ರೆಯಲ್ಲಿ ಉಕ್ತವಾದ ಕಾಲಾನುಕ್ರಮ ಇಲ್ಲಿ ಇಟ್ಟುಕೊಂಡಿದೆ. ಕನಕದಾಸರ ಹೆಸರು ಪುರಂದರದಾಸರ ಮುಂಚೆ ಬಂದಿದೆ. ಕನಕದಾಸರ ಕಾವ್ಯದಿಂದ ಪದ್ಯಭಾ ಮೊದಲು ಆರಿಸಿಕೊಂಡಿರುವುದರಿಂದ ಕನಕದಾಸರ ಹೆಸರು ದಾಸರ ಹೆಸರಿಗೆ ಮುಂಚೆ ಕೊಡಬೇಕಾಯಿತು. ಕೀರ್ತನೆಗಳನ್ನೆಲ್ಲ ಕಡೆಗೆ ಸೇರಿಸಿರುವುದರಿಂದ ಸರ್ಪಭೂಷಣಕವಿಯ ಕೀರ್ತನೆಯನ ಸಂದರ್ಭದಲ್ಲಿ ಕೊಡಲಾಗಿದೆ. ಲಕ್ಷ್ಮೀಶ, ಸರ್ವಜ್ಞ, ಸೋಮ ಮೊದಲಾದ ಕವಿಗಳ ಕಾಲ ವಿವಾದಾಸ್ಪದವಾಗಿರುವುದರಿಂದ ಕವಿ ಕಾರರ ಅಭಿಪ್ರಾಯವನ್ನೇ ಸಾಮಾನ್ಯವಾಗಿ ಇಲ್ಲಿ ಅನುಸರಿಸಲಾಗಿದೆ.

ಡಿ. ಕೆ. ಭೀಮಸೇನರಾ

# ಪ್ರಕಾಶಕರ ಅರಿಕೆ

ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿ ಪ್ರೊ. ಡಿ. ಕೆ. ಭೀಮಸೇನರಾಯರು ಈ ಪದ್ಯಸಂಕಲನವನ್ನು ನಮಗ ಸಂಪಾದಿಸಿಕೊಟ್ಟಿರುವುದರಿಂದ ಅವರ ಉಪಕಾರವನ್ನು ಸ್ಮರಿಸುತ್ತೇವೆ.

ಈ ಪುಸ್ತಕದಲ್ಲಿ ಆಧುನಿಕ ಕವಿಗಳ ಕೃತಿಗಳನ್ನೂ ಆರಿಸಿಕೊಂಡಿ ಆ ಕವಿಗಳಿಗೆ ನಮ್ಮ ಕೃತಜ್ಞತೆಗಳು.

ಜೆ. ಕೆ. ಪ್ರಾಣೇಶಾಚಾರ್ಯ

# ಅನುಕ್ರಮಣಿಕೆ

---


ಈ ಪದ್ಯ ಸಂಗ್ರಹವು ಹೈದರಾಬಾದು ಸತ್ಯಾಶ್ರಯ ಪ್ರಕಾಶನ ಮಂದಿರದ ಒಡೆಯರಾದ ಜೆ. ಕೆ. ಪ್ರಾಣೇಶಾಚಾರ್ಯರಿಂದ ಪ್ರಕಾಶಿಸಲ್ಪಟ್ಟಿದೆ.


ಎಲ್ಲ ಹಕ್ಕುಗಳೂ ಪ್ರಕಾಶಕರಿಗೆ ಸೇರಿವೆ.



ಬೆಲೆ: ೨ ರೂ. ೮ ಆಣೆ

(ಭಾರತ ನಾಣ್ಯ)

# ಶುದ್ಧ ಪತ್ರಿಕೆ

| ಪುಟ | ಪಾಠ | ಪದ್ಯ | ಪಙ್ಕ್ತಿ | ತಪ್ಪು | ಒಪ್ಪು |
|---|---|---|---|---|---|
| ೫ | ೫ | ೬ | ೨ | ಬಳ್ರಿವಿನೆಗಂ | ಬಳಿವಿನೆಗಂ |
| ೫ | ೫ | ೬ | ೪ | ಪಳ್ರಿಯಂ | ಪಳಿಯಂ |
| ೧೦ | ೬ | ೪ | ೨ | ನಿಱಿಸಿದರೆನೆ | ನಿಱಿಸಿದರೆನೆ |
| ೧೩ | ೮ | ೧ | ೩ | ಯುಕ್ಕಣೆ | ಯುಗಕ್ಕಣೆ |
| ೧೮ | ೯ | ೫ | ೨ | ಕಡೆಗಾಣಲ್ಬಗವೆ ಯೆಪ್ಪೊಡೆ | ಕಡೆಗಾಣಲ್ಬಗೆವೆ ಯಪ್ಪೊಡೆ |
| ೨೨ | ೧೦ | ೧೮ | ೩ | ಎಲ್ಲಿತ್ರೊ | ಎಲ್ಲಿತ್ತೊ |
| ೩೦ | ೧೨ | ೬ | ವಚನ | ಕೊಂಡಂತೆಗೆ ಯ್ವೆನೆಂದು | ಕೊಂಡಂತೆ ಗೆಯ್ವೆನೆಂದು |
| ೩೩ | ೧೩ | ೮ | ೪ | ಣ್ಣಲರಲ್ಗೆಪಿಂದೆ | ಣ್ಣಲರಲೆಪಿಂದೆ |
| ೪೦ | ೧೫ | ೨೧ | ೨ | ಕಠಿಣನಗುಣ | ಕಠಿನಗುಣ |
| ೪೩ | ೧೬ | — | ೨೬ | ಸಿರಿಯನುಗಳುತಿರೆ | ಸಿರಿಯನುಗುಳುತಿರೆ |
| ೫೧ | ೧೮ | ೧ | ೩ | ವಿದ ಬೆಳ್ಳಿ | ವಿದು ಬೆಳ್ಳಿ |
| ೫೬ | ೧೯ | — | ೩೯ | ಭಟರಟ್ಟೆ | ಭಟರಟ್ಟೆ |
| ೫೬ | ೧೯ | — | ೪೦ | ಹುಟಿ | ಹುಟ್ಟಿ |
| ೫೬ | ೧೯ | — | ೪೦ | ಸಂಕಳ | ಸಂಕುಳ |
| ೯೩ | ೨೯ | ೧೬ | ೬ | ನಡಸನು | ನಡೆಸನು |
| ೯೫ | ೨೯ | ೨೫ | ೩ | ನಟು | ನಟ್ಟು |
| ೧೦೩ | ೩೩ | ೩ | ೩ | ಕಷ | ಕಷ್ಟ |
| ೧೧೪ | ೩೭ | ೯ | ೫ | ತೆಗದು | ತೆಗೆದು |
| ೧೧೭ | ೩೭ | ೨೩ | ೫ | ಯೋಗದಲಿಗೋ | ಯೋಗದಲಿ ಗೋ |
| ೧೧೮ | ೩೭ | ೨೪ | ೬ | ಮರುಕೊಳಿ | ಮರುಕೊಳಿಸಿ |
| ೧೨೨ | ೩೮ | ೨ | ೩ | ಕೈಕೆಯನು ಸಾರಿ | ಕೈಕೆಯನುಸಾರಿ |
| ೧೨೮ | ೪೦ | ೫ | ೪ | ತಿರುವಿನೋ। | ತಿರುವಿನೊ। |
| ೧೩೪ | ೪೦ | ೨೧ | ೪ | ವಂವೆರಸಿ | ವಂಬೆರಸಿ |
| ೧೪೮ | ೪೬ | ೬ | ೧ | ದಂತಪಂಙ್ಕ್ತಿ | ದಂತಪಙ್ಕ್ತಿ |
| ೧೫೩ | ೪೮ | ೫ | ೪ | ರುಂ ಸಲುವಂತೆ | ಸಾರುಂ ಸಲುವಂತೆ |
| ೧೫೬ | ೫೦ | — | ೨ | ಬಸುಗುಟ್ಟುವ | ಬುಸುಗುಟ್ಟುವ |
| ೧೬೨ | ೫೪ | — | ೧೩ | ನಟರಾ | ನಟ್ಟರಾ |
| ೧೬೪ | ೫೪ | — | ೬೨ | ಯೇಸ | ಯೇಸು |

**ಸೂಚನೆ: ಪುಟ ೧೭೫ ಆದಮೇಲೆ ಮುಂದಿನ ಎರಡು ಪುಟಗಳು ೧೭೫ಅ, ೧೭೫ಆ**

# ೧. ಕನ್ನಡ ನಾಡು

ಕಂ|| ಕಾವೇರಿಯಿಂದಮಾ ಗೋ |
ದಾವರಿವರಮಿರ್ದ್ದ ನಾಡದಾ ಕನ್ನಡದೊಳ್ ||
ಭಾವಿಸಿದ ಜನಪದಂ ವಸು |
ಧಾವಳಯವಿಲೀನವಿಶದವಿಷಯವಿಶೇಷಂ || ೧

ಅದಱೊಳಗಂ ಕಿಸುವೊೞಲಾ |
ವಿದಿತಮಹಾಕೊಪಣನಗರದಾ ಪುರಿಗೆಱೆಯಾ ||
ಸದಭಿಸ್ತುತಮಪ್ಪೊಂಕುಂ |
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ || ೨

ಪದನಱಿದು ನುಡಿಯಲುಂ ನುಡಿ |
ದುದನಱಿದಾರಯಲುಮಾರ್ಪರಾ ನಾಡವರ್ಗಳ್ ||
ಚದುರರ್ನ್ನಿಜದಿಂ ಕುಱಿತೋ |
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ || ೩

ಕುಱಿತವರಲ್ಲದೆ ಮತ್ತಂ |
ಪೆಱರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್ ||
ಕಿಱುವಕ್ಕಳ್ಮಾಮೂಗರು |
ಮಱಿಪಲ್ಕಱಿವರ್ವ್ವಿವೇಕಮಂ ಮಾತುಗಳಂ || ೪

ಜಾಣರ್ಕ್ಕಳಲ್ಲದವರುಂ |
ಪೂಣಿಗರಱಿಯದೆಯುಮಱಿವವೋಲವಗುಣದಾ ||
ತಾಣಮನಿನಿಸೆಡೆವೆತ್ತೊಡೆ |
ಮಾಣದೆ ಪಿಡಿದದನೆ ಕೃತಿಗಳಂ ಕೆಡೆ ನುಡಿವರ್ || ೫

(ನೃಪತುಂಗ-ಕವಿರಾಜಮಾರ್ಗ)

# ೪. ತನುಜೆಯಗಲ್ಕೆ

ಚಂ| ಮನಮುೞಿದಂಜಿ ಬೆರ್ಚಿ ಬೆಸಕೆಯ್ ನಿಜವಲ್ಲಭನೇ
ನನೆಂದೊಡಂ |
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ- ||
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ-|
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪ
ವಾರಿಯಂ ||೧||

ಚಂ| ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇೞ್ವಿಕೈ-|
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರ ಜನಸಂಕಟಮೊಪ್ಪಿದುದಾಪ್ರ
ಯಾಣದೊಳ್ ||೨||
(ಪಂಪ-ಆದಿಪುರಾಣ)

---

# ೫. ಅಗ್ರಪೂಜೆ

ಧರ್ಮಪುತ್ರಂ ಪೇೞೆ ವಿಾಸಭೆಯೊಳಗ್ರಪೂಜೆಗಾರ್ ತಕ್ಕರೆನೆ ಗಾಂಗೇಯನಿಂತೆಂದಂ--

ಮ|| ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾ|
ತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ||
ಚಲದಿಂ ಸೀಳ್ದವನಾವನಬ್ಧಿ ಮಥನ ಪ್ರಾರಂಭದೊಳ್ ಮಂದರಾ|
ಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ ||೧||

ವ|| ಎಂದು ತನ್ನ ಮನದೊಳಚ್ಚೊತ್ತಿದಂತೆ ನುಡಿದ ಗಾಂಗೇಯನ ಮಾತಂ ಮನದೇಗೊಂಡು ಯಮುನಂದನನಾನಂದಂ ಬೆರಸಂತೆ ಗೆಯ್ವೆನೆಂದು ಪುರುಷೋತ್ತಮಂಗರ್ಘ್ಯಮೆತ್ತಿದಾಗಳ್—

ಕಂ|| ಮುಳಿದು ಶಿಶುಪಾಲನಾ ಸಭೆ|
ಯೊಳಗೆ ಮಹಾ ಪ್ರಳಯ ಜಳಧಿ ನಾದದಿನಿರ್ದು||
ಚ್ಚಳಿಸಿ ನುಡಿದಂತೆ ಕಳೆ ಕಳೆ|
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ ||೨||

ತೀವಿದ ನರೆಯುಂ ಡೊಳ್ಳುಂ|
ದೇವವ್ರತನೆನಿಸಿ ನೆಗಟ್ದ ಯಶಮುಂ ಬೆರಸಿ||
ನ್ನೀವುದು ಹರಿಗರ್ಘ್ಯಮನೆಂ|
ದಾವನುಮಾ ಭೀಷ್ಮರಂತು ನುಡಿದರುಮೊಳರೇ ||೩||

ಕುರುವೃದ್ಧಂ ಕುಲವೃದ್ಧಂ|
ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್||
ದೊರೆಗಿಡಿಸಿ ನುಡಿದೊಡೇನೊಲ|
ವರಮೆನ್ನದೆ ನೀನುಮದನೆ ಕೊಂಡೆಸಗುವುದೇ ||೪||

ಮನದೊಲವರಮುಳ್ಳೊಡೆ ಕುಡು|
ಮನೆಯೊಳ್ ಹರಿಗಗ್ರಪೂಜೆಯಂ ಯಜ್ಞದೊಳೀ||
ಮನುಜಾಧೀಶ್ವರ ಸಭೆಯೊಳ್|
ನೆನೆಯಲುಮಾಗದು ದುರಾತ್ಮನಂ ಬೆಸಗೊಳ್ವಾ ||೫||

ಅಳವಱಿಯದೆಗ್ಗು ಬಳವಳ|
ಬಱಿವಿನೆಗಂ ಪಚ್ಚ ಪಸಿಯ ತುಱುಕಾರಂಗ||
ಗ್ಗಳಿಕೆಯನೆ ಮಾಡಿ ನೀನುಂ|
ಪಱಿಯಂ ಕಟ್ಟಿದೆಯೊ ಭೂಪರಿಸಿಬರ ಕೊರಲೊಳ್ ||೬||

ದೇವರನಡಿಗೆಱಗಿಸಿ ಸಕ|
ಳಾವನಿತಳದದಟರಂ ಪಡಲ್ವಡಿಸಿದ ಶಾ||
ರ್ಯಾವಷ್ಟಂಭದೊಳಾನಿರೆ|
ಗೋವಳಿಗಂಗಗ್ರ ಪೂಜೆಯಂ ನೀಂ ಕುಡುವಾ ||೭||

ಸಮುಕಟ್ಟೆಱಿಯದೆ ಹರಿಗ|
ರ್ಘ್ಯಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ತಾ||
ನಮರ್ದುಮಮರ್ದಿರದೆ ತಣಿಯುಂ|
ಡಮರ್ದಂ ಗೋಮೂತ್ರದಿಂದೆ ಬಾಯ್ದೊಸಿದವೋಲ್ ||೮||

ಕಂ|| ಕುಡವೇಟ್ಟನ ಕುಡುವನ ಕುಡೆ|
ಪಡೆವನ ಪೆಂಪೇಂ ನೆಗಟ್ತೆವಡೆಗುಮೊ ಪೇಟ್ವಂ||
ಕುಡವೇಟ್ಗೆಮ ಕುಡುವಣ್ಣಂ|
ಕುಡುಗೆಮ ಕುಡೆ ಕೊಳ್ವ ಕಲಿಯನಱಿಯಲ್ಕಕ್ಕುಂ ||೯||

ವ || ಎಂದನಿತಱಿೊಳ್ ಮಾಣದೆ ಗೀರ್ವಾಣಾರಿಯಸುರಾರಿಯ ನಿಂತೆಂದಂ—

ಕಂ|| ದೊರೆಯಕ್ಕುಮೆ ನಿನಗೆ ಯುಧಿ|
ಷ್ಠಿರನರ್ಘ್ಯಮನೆತ್ತೆ ಶಂಖದೊಳ್ ಪಾಲೆಱೆದಂ||
ತಿರೆ ಮಲಿನಮಿಲ್ಲದೊಳ್ಗುಲ|
ದರಸುಗಳಿರೆ ನೀನುಮಗ್ರಪೂಜೆಯನಾಂಪಾ ||೧೦||

ಮನದೊಲವರದಿಂದೀ ಯಮ |
ತನಯನ ಕುಡುವಗ್ರಪೂಜೆ ಮತ್ಸನ್ನಿಧಿಯೊಳ್ ||
ನಿನಗಶನಿಯ ಮಿಟ್ತುವ ನಂ |
ಜಿನ ದೊರೆಯೆಂದೊಣರ ನಂದಗೋಪಾಲಸುತಾ ||೧೧||

ಮನೆ ನಿನಗೆ ನಂದಗೋಪಾ |
ಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ ಪ ||
ಚ್ಚನೆ ಪಸಿಯ ಗೋವನ್ನೈ ಕರ |
ಮನಯದೆ ನಿನ್ನಳವಿಗಳವನಱಿಯದೆ ನೆಗಳ್ದ್ವೆ ||೧೨||

ಮುರನಡಸಿ ಪಿಡಿದು ಕಟ್ಟಿದ |
ಪರಿಭವಮಂ ಮಱೆದೆ ನಿನ್ನ ಪೆಡಗೆಯ್ಗಟ್ಟಂ||
ಶರದಿಂ ಬಿಡಿಸಿದನಲ್ಲನೆ |
ಸರಿತ್ಸುತಂ ಬನ್ನವಿನ್ನವೆಂಬುವುಮೊಳವೇ ||೧೩||

ದನುಜಾಂತಕನೆಂಬೀ ನಿ |
ನ್ನ ನಚ್ಚುವೋದಂಕಮೆಲವೊ ಮುನ್ನೆನ್ನನ್ನಂ ||
ದನುಜಂ ಪುಟ್ಟದೆ ಸಂದುದು
ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ ||೧೪||

**ಕಂ||** ಆನಿರ್ದ ಸಭೆಯೊಳರ್ಘ್ಯ್ಯವು |
ನಾನಲ್ಘಾಟಿಸಿದ ನಿನ್ನ ಬಿಸುನೆತ್ತರನಿಂ ||
ತೀ ನೆರವಿ ನೋಡೆ ಕುಡಿಯದೊ |
ಡೇನೋ ಶಿಶುಪಾಲನೆಂಬ ಪೆಸರೆಸೆದಪುದೇ ||೧೫||

ಮಱೆದ ಮುಚುಕುಂದನೆಂಬನ |
ಮಱೆವೊಕ್ಕುದನಂದು ನೀಂ ಜರಾಸಂಧಂಗಂ ||
ಬೆಱುತೋಡಿದುದಂ ಭೂತಳ |
ಮಱಿಯದೆ ನೆನೆಯೆಲವೊ ಗೋವುಗಾದುದು ಪುಸಿಯೇ ||೧೬||

ಮೊನಾವೆ ಪಂದಿಯೆಂದೆನಿ |
ತಾನುಂ ತೆಱನಾಗಿ ಡೊಂಬ ವಿದ್ದೆಯನಾಡಲ್ ||
ನೀನಱಿವೆಯುಱಿದಿದಿರ್ಚಿದೊ |
ಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ ||೧೭||

ಅಱಿಯದಿದಂ ಮಾಡಿದೆನೆ |
ನ್ನಱಿಯಮಿಕೆಗೆ ಸೈರಿಸೆಂದು ನೀಂ ಸಭೆಯೊಳ್ಕಾ ||
ಲ್ಗೆಱಗೆಱಗು ಕೊಲ್ಲೆನೆಂದೆರ್ದೆ |
ತೆಱೆವಿನೆಗಂ ಹರಿಯ ನೆಱನನಸುರಂ ನುಡಿದಂ ||೧೮||

ವ|| ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡ ನಡುಗಿ—

ಕಂ|| ಪೊಳೆದುಳ್ಕುವ ಕುಡು ದಾಡೆಯ |
ಪೊಳಪು ನೊಸಲ್ಗಡರ್ದು ಪೊಡರ್ವ ಪುರ್ವೆಸೆವಿನಮು ||
ವ್ವಳಿಸುವ ಮುಳಿಸಿನ ದಳ್ಳುರಿ |
ಗಳನುಗುಳ್ವವೊಲುಗುಳ್ದನಸುರನುರಿವ ಪಱಿಗಳಂ ||೧೯||

ವ|| ಆಗಳ್ ಸಭಾಸದರೆಲ್ಲಮೆವೆ ಮಿಡುಕದೆ ಪಂದೆಯುಂ ಪಾವಡರ್ದವೊ
ಲುಸಿರದಿರೆ ನಾರಾಯಣಂ ಶಿಶುಪಾಲನನಿಂತೆಂದಂ—

ಕಂ|| ನಿನ್ನಯ ತಾಯ್ ಸಾತ್ವತಿಯುಂ |
ನಿನ್ನಂ ತಂದೆನ್ನ ತೊಡೆಯಮೇಲಿಱಿಪುವುದುಂ ||
ನಿನ್ನ ಲಲಾಟದ ಕಣ್ಣದು |
ಮುನ್ನಮೆ ಕಿಡೆ ನಿನ್ನ ಮೃತ್ಯುವೆನ್ನಯ ಕೆಯ್ಯೊಳ್ ||೨೦||

ಕಂ|| ನೆಱೆದುದನಱಿದೀ ಕಿಱಿಯವ |
ನಱಿಯದೆ ಕೆಡೆ ನುಡಿದನಪ್ಪೊಡಂ ನೂಱುವರಂ ||
ನೆಱೆ ಸಲಿಸುವುದೆಂದುದನಾಂ |
ಮಱೆವೆನೆ ಬಯ್ ಬಯ್ಯೆ ಸಲಿಸುವೆಂ ನೂಱುವರಂ ||೨೧||

ಮುನಿಯಲೆನಗಾಗ ಗಾಂಗೇ |
ಯನಿರ್ದನಿರ್ದಂ ಘಟೋದ್ಭವಂ ನೆಗಳ್ದ ಪೃಥಾ ||
ತನಯರುಮಿರ್ದರ್ ದುರ್ಯೋ |
ಧನನಿರ್ದಂ ಕೇಳೆ ಪೇಳ್ವಿರಾ ಬಲ್ಲವರುಂ ||೨೨||

ಎನೆಯೆನೆ ಬಾಯ್ಗಂ ಬಂದನಿ |
ತನಿತುಮನಮರಾರಿ ಬಯ್ಯೆ ಸೈರಿಸಿ ನೋಱ್ಪಂ ||
ಬನಿತುವರಂ ಮನ್ನಿಸಿ ನಸು |
ಕಿನಿಸದೆ ಮಿಗೆ ಕಿನಿಸಿ ದಿತಿಜಕುಳದವದಹನಂ ||೨೩||

ಮುಳಿದು ತನಗರ್ಘ್ಯಮೆತ್ತಿದ |
ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ ||
ಕಳಕಳಿಸಿ ನಗುತುಮಿರ್ದುದು |
ತಳಿಗೆಯ ಮೇಲಸುರನದಟಿದೇನಚ್ಚರಿಯೋ ||೨೪||

(ಪಂಪ–ಭಾರತ)

---

## ೬. ವನ

ಕಂ|| ಅಮಿತಗುಣವರ್ಣನಪ್ರ |
ಕ್ರಮಕ್ಕೆ ಸಲೆ ನಾಣ್ಚಿ ತಲೆಯನೆಱಗಿದ ಸುಜನೋ ||
ತ್ತಮರಂತೆ ಭರದಿನೆಱಗಿದು |
ವಮೇಯಪರಿಪಕ್ವ ಗಂಧಶಾಲಿವನಂಗಳ್ ||೧||

ತತ್ಕಳಮಕಣಿಶಕಬಳಸ |
ಮುತ್ಕ ಶುಕ ಪ್ರಕರಮೆಸೆಯೆ ಪೊಸ ನೇತ್ರದ ಚಂ ||
ಚತ್ಕಂಚುಕಮನಿಳಾವಿಳ |
ಸತ್ಕಾಮಿನಿ ತೊಟ್ಟ ಪೋಲ್ವೆಯಂ ಪುಟ್ಟಿಸುಗುಂ ||೨||

ಬಹುಪೋಷಣದಿಮ್ಮಾವಿನ |
ಸಹಕಾರದ ಸೊನೆಯ ಸೋನೆ ಬೆಳೆಯಿಸೆ ಬೆಳೆಗುಂ ||
ಮಹಿಯೆನೆ ಬಣ್ಣಿಸುವ ಪಿತಾ |
ಮಹಂಗಮರಿದೆಗ್ಗ ಮೊಗ್ಗೆ ನಿನಗಮದೆನಗಂ ||೩||

ನವ ಶಶಿಕಳೆಗಳನಮೃತ |
ದ್ರವಂಗಳೊಳ್ ತೀವಿ ತೀವಿ ನಿಱಿಸಿದರೆನೆ ತ ||
ದ್ಧವಳೇಕ್ಷು ಲಕ್ಷ್ಮಿ ನಡೆ ನೋ |
ಡುವ ಜನಪದ ಜನದ ಮನಮನುಱೆ ಸೆಱೆವಿಡಿಗುಂ ||೪||

(ಪೊನ್ನ-ಶಾಂತಿಪುರಾಣ)

---

## ೭. ದುರ್ಯೋಧನನ ಸ್ನೇಹಹೃದಯ

ನೆಗಪಿ ವರೂಥಮಂ ವಸುಧೆ ನುಂಗಿದುದಂ ಸಮುಪಾದದಾಸನಂ
ಬಗೆಗೊಳೆ ತನ್ನ ಮುಂತೆಗೆದ ಮುಷ್ಟಿಯೆ ದಕ್ಷಿಣಕರ್ಣಮೂಲದೊಳ್ |
ಸೊಗಯಿಸೆ ಪಾಱೆಯಂ ನೆಱಪದಾಳ್ದನ ಕಜ್ಜಮನೊಕ್ಕು ಸತ್ತರಂ
ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತಕೇತುದಂಡಮಂ ||೧||

ಅಂತಿರ್ದ ದಿನಕರತನೂಜನಂ ರಾಜರಾಜಂ ನೋಡಿ ಬಾಷ್ಪವಾರಿ ಧಾರಾಪೂರಿತಲೋಚನನುಂ ಮನ್ಯೂದ್ಗತಕಂಠನುಂ ಅಸಹ್ಯಶೋಕಾನಲದಹ್ಯಮಾನಾಂತಃಕರಣನುಮಾಗಿ

ಆನುಂ ದುಶ್ಶಾಸನನುಂ |
ನೀನುಂ ಮೂವರೆ ದಲಾತನುಂ ಕಱಿದ ಬಱಿ- ||
ಕ್ಕಾನುಂ ನೀನೆ ದಲೀಗಳ್ |
ನೀನುಮಗಲ್ದೆತ್ತವೋದೆಯಂಗಾಧಿಪತೀ ||೨||

ನಿನ್ನ ಮಗಂ ವೃಷಸೇನಂ |
ತನ್ನ ಮಗಂ ಸತ್ತನಣ್ಮಿ ಲಕ್ಷಣನುಂ ನೀ- ||
ನೆನ್ನಂ ಸಂತೈಸುವುದಾಂ |
ನಿನ್ನಂ ಸಂತೈಸೆ ಬಂದೆನಂಗಾಧಿಪತೀ ||೩||

ಅಱಿಯಿಸಿದಂ ನಿನ್ನಿಂದಿನ|
ತೆಱನಂ ನೀನೆನಗೆಯೇಕೆ ಮುಳಿದಿರ್ದೆಯೊ ಮೇಣ್||
ಮಱುಮಾತುಗುಡದೆ ರವಿಸುತ|
ಮಱನಿಂದಿರ್ದಪೆಯೊ ಮೇಣ್ ಬೞಲ್ದಿರ್ದಪೆಯೋ ||೪||

ನಿನ್ನ ಕೆಳೆಯಂ ಸುಯೋಧನ-|
ನನ್ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ-||
ನೆನ್ನದೆ ಜೀಯೆನ್ನದೆ ದೇ-|
ವೆನ್ನದೆಯೇಕುಸಿರದಿರ್ದೆಯಂಗಾಧಿಪತೀ ||೫||

ಅನೃತಂ ಲೋಭಂ ಭಯಮುಂ-|
ಬಿಸಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂ-||
ದನ ನನ್ನಿ ಚಾಗಮುಣ್ಮಿಂ-|
ಬಿಸಿತರ್ಕಂ ನೀನೆ ಮೊತ್ತಮೊದಲಿಗನಾದಯ್ ||೬||

ಆನಱಿವೆಂ ಪೃಥೆಯಱಿವಳ್|
ದಾನವರಿಪುವಱಿವನರ್ಕನಱಿವಂ ದಿವ್ಯ-||
ಜ್ಞಾನಿ ಸಹದೇವನಱಿವಂ|
ನೀನಾರ್ಗೆಂದಾರುಮಱಿಯರಂಗಾಧಿಪತೀ ||೭||

ಒಡವುಟ್ಟಿದನೆಂದಱಿದೊಡೆ|
ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ||
ಕುಡಲಾರ್ತೆನಿಲ್ಲ ರಾಜ್ಯ-|
ಕ್ಕೊಡೆಯನನಱಿಯುತ್ತುಮಿರ್ದೆನಂಗಾಧಿಪತೀ ||೮||

ನೀನುಳ್ಳೊಡುಂಟು ರಾಜ್ಯಂ|
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್||
ನೀನುಳ್ಳೊಡುಂಟು ಪೀಟಿಗ|
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ ||೯||

ಹರಿ ಬೇಡೆ ಕವಚವಂ ನೀ-।
ನರಿದಿತ್ತಯ್ ಕೊಂತಿ ಬೇಡೆ ಬೆಗಡದೆ ಕೊಟ್ಟೆಯ್॥
ಪುರಿಗಣೆಯಂ ನಿನಗೆಣೆ ಕಸ-।
ವರಗಲಿ ಮೆಯ್ಗಲಿಯುಮಾವನಂಗಾಧಿಪತೀ ॥೧೦॥

ನಯನದೊಳಮೆರ್ದೆಯೊಳಂ ನಿ-।
ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ-॥
ನ್ನಯ ಕಿವಿಯೊಳಮಿನನಂದನ।
ವಿಯೋಗಮೆಂತಾದುದಱಿಯೆನಂಗಾಧಿಪತೀ ॥೧೧॥

ನಿನ್ನಂ ಕೊಂದ ಕಿರೀಟಿಯು-।
ಮೆನ್ನಣುಗನನಿಕ್ಕಿ ಕೊಂದ ಭೀಮನುಮೊಳನಾ-॥
ನಿನ್ನುಮೊಳೆಂ ಗಡ ಸಾಲದೆ।
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ ॥೧೨॥

ಇಂದಾನಾದೆಂ ಮೇಣಿನ-।
ನಂದನ ಕೇಳ್ ಪಾಂಡುತನಯರಾದರ್ ನಿನ್ನಂ॥
ಕೊಂದುಂ ದುಶ್ಶಾಸನನಂ।
ಕೊಂದುಂ ಬರ್ದುಕುವನದಾವನಂಗಾಧಿಪತೀ ॥೧೩॥

ಎಂದು ವಿಪ್ರಳಾಪಂಗೆಯ್ದು

ಇನಸುತನಿರವಂ ದುಶ್ಶಾ-।
ಸನನಿರವಂ ಕಂಡುಮಿನ್ನುಮೆನ್ನಸು ತಾಂ ನೆ-॥
ಟ್ಟನೆ ಪೋದುದಿಲ್ಲ ಕಲ್ಲೆರ್ದೆ-।
ತನದಿಂದೆನ್ನಂತು ಬರ್ದನಾವನುಮೊಳನೇ ॥೧೪॥

ಎಂದು ತನ್ನಂ ತಾನೆ ನಿಂದಿಸಿಕೊಂಡು

ಸೂನುಗಳಟಿವಂ ಪ್ರಿಯಮಿ-।
ತ್ರಾನುಜರಟಿವಂ ವಿಧಾತ್ರ ನೀಂ ಕಾಣಿಸಿ ಯಿ-॥
ನ್ನೇನಂ ಕಾಣಿಸಲಿರ್ದಪೆ।
ನೀನೆನ್ನಂ ಪಾಪಕರ್ಮನಂ ನಿರ್ಗುಣಿಯಂ ॥೧೫॥

ಕೆಳೆಯಂಗಾಯ್ತುಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ-।
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ-॥
ಡಳಮಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ-।
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತೆನೋ ॥೧೬॥

(ರನ್ನ–ಗದಾಯುದ್ಧ)

---

# ೮. ಭೀಮ-ದುರ್ಯೋಧನರ ಗದಾಯುದ್ಧ

ವಾರಣರಕ್ತಸಿಕ್ತ ಮೃಗರಾಜಯುಗಕ್ಕೆ ನವಪ್ರಸೂನ ರಾ।
ಗಾರುಣ ಕಿಂಶುಕದ್ರುಮಯುಗಕ್ಕೆ ಸಧಾತುಕುಭೃದ್ಯುಗಕ್ಕೆ ಸಿಂ-॥
ದೂರಿತಗಂಧಸಿಂಧುರಯುಗಕ್ಕೆಣೆಯೆಂಬಿನಮಣ್ಮಿ ಕಾದಿದರ್।
ಕೌರವರಾಜನುಂ ಕುರುಕುಲಾಂತಕನುಂ ರುಧಿರಾದ್ರ್ರಮೂರ್ತಿಗಳ್ ॥೧॥

ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸಹೋ-।
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸನೋರಃಸ್ಥಳ-॥
ಕ್ಷರದಸ್ರಾಂಬುವನಾರ್ದು ಪೀರ್ದ ಮುಳಿಸಿಂಗಂ ಮೂಱುಗೊಳ್ಳೆಂದು ಮ-।
ತ್ಸರದಿಂದೋವದೆ ಪೊಯ್ದನೆತ್ತಿ ಗದೆಯಂ ದುರ್ಯೋಧನಂ ಭೀಮನಂ ॥೨॥

ಎಂದು ಮುಟ್ಟಿ ಮೂದಲಿಸೆ

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡಜೂದಿಂ- |
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಲೋಕನಭ್ರಾಂತಿಗೆಂದೋ- ||
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲುರಮಂ ಕೆನ್ನೆಯಂ ನೆತ್ತಿಯಂ ಕೋ|
ಪದಿನಯ್ದುಂ ದುರ್ನಯಕ್ಕಯ್ದಿಡೆಯಸುರುಗದಾದಂಡದಿಂ ಭೀಮಸೇನಂ ||೩||

ಚರಣಾಕ್ರಾಂತಂ ಮಹೀಮಂಡಲಮದಿರೆ ಭುಜಾಕ್ರಾಂತಮಾಶಾ
ಗಜೇಂದ್ರೋ |
ತ್ಕರಮಾಶಾಭಿತ್ತಿಯಿಂದಂ ಪೆಱಡಗೆಯೆ ಗದಾಕ್ರಾಂತಮುದ್ಭ್ರಾಂತವಿದ್ಯಾ ||
ಧರಚಕ್ರಂ ಗೆಂಟುಗೆಂಟಾಗಿರಿಸೆ ನಿಜವಿಮಾನಂಗಳಂ ಭೈರವಾಡಂ-|
ಬರಮಾ ಕಲ್ಪಾಂತಕಾಲಂ ನೆಗಟ್ದುದು ಸಮರಂ ಭೀಮದುರ್ಯೋಧನೀಯಂ ||೪||

ನೆಲಸಿದ ಬಿನ್ನಣಂ ಸೆಣಸಿ ಬಿನ್ನಣಮಂ ಗೆಲೆ ಕಾಣ್ಕೆ ಕಾಣ್ಕೆಯಂ |
ಗೆಲೆ ಜವಮಂ ಜವಂ ಗೆಲೆ ಬಲಂ ಬಲಮಂ ಗೆಲೆ ದಂಡೆ ದಂಡೆಯಂ ||
ಗೆಲೆ ಮುಳಿಸುಣ್ಮೆ ಪೊಣ್ಮೆ ಮುಳಿಸಂ ಗೆಲೆ ಸತ್ವದಳುರ್ಕೆ ಸತ್ವಮಂ |
ಗೆಲೆ ಗೆಲಲಾರ್ತರಿಲ್ಲ ಕುರುಪಾಂಡುತನೂಭವರೊರ್ವರೊರ್ವರಂ ||೫||

ಅಂತು ನೆಟಿಲೊಳ್ ಪೋರ್ಕುಳಿಯಾಡುವಂತೊರ್ವರೊರ್ವರಂ ಗೆಲಲ್ ನೆಱೆಯದಿರೆ ದುರ್ಯೋಧನಂ ಕರಂ ಮುಳಿದು

ಕುರುರಾಜಂ ವಿದ್ಯಾಧರ- |
ಕರಣದೆ ನೆಗೆದಂಬರಕ್ಕೆ ಗದೆಯಂ ಕ್ರಮದಿಂ ||
ತಿರಿಪೆ ಧರಾಚಕ್ರಂ ಕೋ-|
ವರಚಕ್ರಂ ತಿರಿವ ತೆಱದೆ ತಿರಿದತ್ತೆನಸುಂ ||೬||

ಅಂತು ಮೂದಲಿಸದೆ ಇಱಿವುದು ತುಱಿಲಾಯ್ತುಮಲ್ಲೆಂದು ಮುಟ್ಟಿ ಮೂದಲಿಸಿ

ತೆಱಪಂ ಸಿಟ್ಟಿಸಿ ಕುರುಪತಿ |
ಬಱಸಿಡಿಲೆಱಗುವವೊಲೆಱಗಿ ಪೊಯ್ಯಲೊಡಂ ಮೆಯ್ ||
ಪೞಿದು ಪವನಜನದೇಕೆಂ- |
ದೞಿಯಿಂ ಮತಿವಿಕಳನಾಗಿ ಮೂರ್ಛೆಗೆ ಸಂದಂ ||೭||

ಅಂತು ಕುಲಿಶಾಭಿಘಾತದೊಳ್ ನೀಲಾಚಲಮೆ ಕೆಡೆವಂತೆ ಕೆಡೆದು ಮೂರ್ಛಾಗತನಾಗಿರ್ದ ಭೀಮಸೇನನಿರವಂ ಕಂಡು ಗಾಂಡೀವಿ ಕೋಪಾತುರಾಟೋಪಮಂ ತಾಳ್ದಿ

ಎಲ್ಲಿಯ ಬಲದೇವಂ ಮ-|
ತ್ತೆಲ್ಲಿಯ ಸತ್ಯವ್ಯವಸ್ಥೆ ದುರ್ಯೋಧನನಂ ||
ಕೊಲ್ಲದಿರೆನೆಂದು ಭಾರತ- |
ಮಲ್ಲಂ ಗಾಂಡಿವಕೆ ನೇಱಿದಂ ನೆಱೆ ತಿರುವಂ ||೮||

ಮುಳಿದೇವಂ ಹಲಿ ಕೃಷ್ಣಂ |
ಮುಳಿದೇವಂ ಧರ್ಮನಂದನಂ ಮುಳಿದೇವಂ ||
ಮುಳಿದರನಿಕ್ಕುವೆನೆಂದು-|
ಮ್ಮಳಿಸಿದರಿಱಿಯಲ್ಕೆ ನಕುಲಸಹದೇವರ್ಕಳ್ ||೯||

ಅರಿಗಿಂಬಾಯ್ತುೞಿವಾದುದು |
ಮರುತ್ಸುತಂಗರ್ಜುನಾದಿಗಳ್ ಮುಳಿವರ್ ಮೂ- ||
ವರುಮೆನ್ನ ನನ್ನಿಗೀಗಳೆ |
ಪರಿಭವಮಾಯ್ತೆಂದು ಧರ್ಮಜಂ ಚಿಂತಿಸಿದಂ ||೧೦||

ಅಲರ್ದ ಹಲಧರನ ಮೊಗಮುಂ |
ತಲೆಯಂ ಬಾಗಿರ್ದ ಧರ್ಮತನಯನ ಮೊಗಮುಂ ||
ಜಲರುಹನಾಭಂ ಕಂಡೆರ್ದೆ |
ಕಲಂಕಿ ಕಣ್ಜರ್ಬು ಜರ್ಬಿದಂ ಗಾಂಡಿವಿಯುಂ ||೧೧||

ಆಪ್ರಸ್ತಾವದೊಳ್ ಧಾತುನಿರ್ಜರಗಿರಿ ಕೆಡೆವಂತು ಕೆಡೆದಿರ್ದಪಗೆಯಂ ನೋಡಿ ಧರ್ಮಯುದ್ಧಮಂ ನೆನೆದು

ಇಱಿಯೆಂ ಬಿಟ್ಟನನೆಂಬೀ |
ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಳೆ- ||
ಟ್ಚಱಿಸಿದುದು ಭೀಮನಂ ಮೆಯ್- ||
ಮಱೆದವನಂ ತಂದೆ ಸುತರ್ಗೆ ಕೂರದರೊಳರೇ ||೧೨||

ಅಂತು ಮೂರ್ಛೆಯಿಂ ಮಾರುತಿಯೆಟ್ಚತ್ತಾಗಳ್

ಪೊಡೆಯಲರಾತಂ ರಾಗದೆ |
ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀ-||
ಯೆಡೆಯೆಂದು ತೋಱಿ ಕುಡೆ ಪೊಲ- |
ಗಿಡದಱಿದಂ ಪರಮಪಂಡಿತಂ ಪವನಸುತಂ ||೧೩||

ತಿಳಿದಾಗಳ್ ನೆಱನಿಂತುಟೆಂದು ನೆಲನಂ ಮಾಱುದ್ದಿ ಕಯ್ಯಿಂ ಧರಾ |
ತಳದೊಳ್ ಸೂಸಿದ ತನ್ನ ತೀವ್ರಗದೆಯಂ ಕಂಡೆತ್ತಿಕೊಂಡಂಬರ ||
ಸ್ಥಳದಿಂದಂ ಸಿಡಿಲೇಟ್ಗೆಯಿಂದೆಱಗಿ ಪೊಯ್ವಾಗಳ್ ಗದಾದಂಡದಿಂ |
ಮುಳಿದಿಟ್ಟಂ ಕಲಿ ಸತ್ರಿಗಂ ಕುರುಕುಭೃಚ್ಚಂಡೋರುದಂಡಂಗಳಂ ||೧೪||

ಇಡೆ ತೊಡೆಯನುಡಿದು ನೆಟ್ಟನೆ |
ಕೆಡೆಯುತ್ತುಂ ಕರ್ಚಿ ನೆಲನನಾನಿದನೆಂತುಂ ||
ಬಿಡೆನೆಂಬ ತೆಱದೆ ಕುಲಗಿರಿ ||
ಕೆಡೆವಂದದೆ ಕೆಡೆದು ಕೌರವೇಂದ್ರಂ ಮಡಿದಂ ||೧೫||

ಅಂತು ದಿಕ್ಕರಿಕರಾನುಕಾರಿಗಳಪ್ಪ ನಿಜಭುಜಸ್ತಂಭಂಗಳಿಂ ಕುರುಕುಲ ಮಹೀಶನ ಕದಳೀಸ್ತಂಭಂಗಳನನುಕರಿಸುವ ತೊಡೆಗಳನುಡಿದು ಆಶ್ರಮದೊಳ್ ಪುಡಿಯೊಳ್ ಪೊರಳ್ಚಿ ತನ್ನ ಮುನ್ನ ನುಡಿದೂರುಭಂಗಪ್ರತಿಜ್ಞೆಯಂ ತೀರ್ಚಿ ಮಕುಟಭಂಗಪ್ರತಿಜ್ಞೆಯಂ ತೀರ್ಚಲೆಂದು ಕುರುಕುಲಾಂತಕಂ ಮಾಮಸಕಂ ಮಸಗಿ

ಇದು ಭುವನಾಧಿಪತ್ಯಸವನೋದಕದಿಂ ಗಡ ಪೂತಮಾದುದಿಂ- |
ತಿದು ಧವಳಾತಪತ್ರದ ನೆಟಿಲ್ಗೆ ಗಡಂ ಗುಱಿಯಾದುದಾರ್ಗಮಿಂ-||
ತಿದು ಗಡ ಬಾಗದೀ ತಲೆಗೆ ತಕ್ಕುದನೀಗಳೆ ಮಾಱ್ಪೆನೆಂದು ಕೋ- |
ಪದಿನೊದೆಯಲ್ಕೆ ಸಾರ್ತರೆ ಹತೋರುಸಪತ್ನ ಕಿರೀಟಶೃಂಗಮಂ ||೧೬||

ಬಲದೇವಾದಿಗಳಾಗದಾಗದೊದೆಯಲ್ಕೇಕಾದಶಾಕ್ಷೌಹಿಣೀ-|
ಬಲಲಕ್ಷ್ಮೀಪತಿಯಂ ಪರಾಭವಿಸದಿರ್ ಛಿಃ ತಕ್ಕುದಲ್ಲೆಂದು ಮಾ-||
ರ್ಕೊಳಲುಂ ಮಾಣದೆ ಭೀಮಸೇನನೊದೆದಂ ವಾಮಾಂಘ್ರಿಯಿಂ ರತ್ನಮಂ-|
ಡಲರಶ್ಮಿಪ್ರಕಟಜ್ವಲನ್ಮಕುಟಮಂ ಕೌರವ್ಯರಾಜೇಂದ್ರನಾ ||೧೭

ಅಂತು ಗುಣರತ್ನಾರ್ಣವಂ ತೀರ್ಣಪ್ರತಿಜ್ಞಾರ್ಣವನುಮಾಗೆ |
ಸುರತರುಕುಸುಮೋತ್ಕರಮುಂ||
ಸುರಿಯೆ ಸುರಾಂಗನೆಯರೆಸೆಯೆ ಸುರದುಂದುಭಿಗಳ್ |
ಪರಮಾಶೀರ್ವಚನ ಪರಂ-|
ಪರೆಯಿಂದಂ ಮೆಚ್ಚಿ ಪರಸಿದರ್ ಸತ್ತ್ರಿಗನಂ || ||೧೮||

(ರನ್ನ-ಗದಾಯುದ್ಧ)

---

## ೬. ವೈ ರಾ ಗ್ಯ

ಕಂ|| ಅರಯೆ ಮೂತ್ರಪುರೀಷಾ |
ಗಾರಂ ಸಂಪ್ರಾಪ್ತ ಸಪ್ತಧಾತುವಿಕಾರಂ ||
ಚಾರುಗುಣದೂರಮತಿವಿಷ |
ಡಾರು ಶರೀರಂ ದುರಂತ ದುಃಖಾಧಾರಂ ||೧||

ತನು ತಾಳಲಾಱದನ್ನೆಗ |
ಮೆನಸುಂ ನೀನದಱಿಂ ೊಳಾತ್ಮಶಕ್ತಿಕ್ಷಯಮು ||
ಪ್ಪಿನೆಗಮಿರಲ್ಕಕ್ಕುಮೆ ಕಱಿ |
ದ ನೀರ್ಗೆ ಬಂದಪುದೆ ಬೞಿಕ ಜರೆಗಂ ತಿರ್ದಲ್ ||೨||

ಎನಿತೆನಿತು ಕೞಿದಭವಮುಂ |
ನೆನೆದಪೆಯೆನಿತೆನಿತು ಭವದಬಂಧುಗಳಂ ನೀಂ ||
ನೆನೆದಪೆಯೆನಿತೆನಿತೊಡಲಂ |
ನೆನೆದಪೆಯೆಲೆ ಜೀವ ನೀನೆ ಪೇೞ್ ಪವಣೊಳವೇ ||೩||

ಎನಿತಂ ಕುಕ್ಕುಱಿಗುದಿದಪೆ |
ಯೆನಿತಂ ತಕ್ಕಳಗಱಿಲ್ದಪೈ ಜೀವನೆ ನೀ ||
ನೆನಿತಂ ಮಲ್ಕಲ ವ್ಯಱುಗುವೆ |
ಯೆನಿತಂ ಸಂಸಾರದೊಳಗೆ ತಿಱ್ರನೆ ತಿರಿವೈ ||೪||

ಕಡೆಯಿಲ್ಲದ ಸಂಸಾರದ |
ಕಡೆಗಾಣಲ್ಬಗವೆಯೆಪ್ಪೊಡೆನ್ನುಕ್ತಿಗೊಡಂ ||
ಬಡು ಜೀವ ನಿನ್ನ ಕಾಲಂ |
ಪಿಡಿವೆಂ ಧರ್ಮಮನೆ ಮಗುಳೆ ಬಲ್ವಿಡಿವಿಡಿಯಾ ||೫||

(ರನ್ನ–ಅಜಿತಪುರಾಣ)

---

# ೧೦. ಮಹಾಶ್ವೇತೆ ಪುಂಡರೀಕರ ಪ್ರಣಯ

(ಮಹಾಶ್ವೇತೆ ತಾನು ಪುಂಡರೀಕನಲ್ಲಿ ಅನುರಕ್ತೆಯಾದುದನ್ನು ಚಂದ್ರಾಪೀಡನಿಗೆ ಹೇಳುತ್ತಾಳೆ—)

ಎಸೆವ ವಸಂತಮಾಸದೆ ವಸಂತಮನಾಂತ ಕುಜಾತಪಲ್ಲವ |
ಪ್ರಸರದಿನಾ ವಸಂತಸಮಯಂ ಕುಸುಮಾವಳಿಯಿಂದೆ ಪಲ್ಲವಂ ||
ಮಿಸುಪಳಿಮಾಲೆಯಿಂ ಕುಸುಮಮಂಜರಿ ರಂಜಿಸುವಂತಿರಲ್ ವಿಜೃಂ |
ಭಿಸಿದುದು ಯೌವನೋದಯ ವಿಲಾಸಮನುಕ್ರಮದಿಂ ಮದಂಗದೊಳ್ ||೧||

ಆಗಳೊರ್ಮೆ ವಸಂತದೊಳುಳ್ಳಲರ್ದ ನವನಳಿನ ಕುಮುದ ಕುವಲಯ ಕಲ್ಹಾರಂಗಳಿಂ ಕಣ್ಗೊಳಿಪಚ್ಛೋದಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು ನೋಲ್ಪಲ್ಲಿ ಮುಂದೆ ಮುನಿಕುಮಾರನೊರ್ವನೆಯ್ತರುತಿರೆ

ಕರತಳವೊಂದಱೊಳ್ ಮಣಿಕಮಂಡಲು ನಾಳಸಮೇತಮಪ್ಪ ಕೇ |
ಸರಫಲದಂತಿರಿರ್ದುದು ಮನೋಜವಿನಾಶದಿನಟ್ಟಿ ತನ್ಮನೋ ||
ಹರಿಯ ಪೊದಳ್ದ ಕಣ್ಬನಿಗಳಂತಮಲಸ್ಫಟಿಕಾಕ್ಷಮಾಲೆ ಸುಂ |
ದರತರಮಾದುದೊಂದು ಕರಪಲ್ಲವದೊಳ್ ಮುನಿಪಾಗ್ರಗಣ್ಯನಾ ||೨||

ತನಗನುರೂಪಮೆಂಬಿನೆಗಮೊರ್ವ ಕುಮಾರತಪಸ್ವಿ ದೇವತಾ |
ರ್ಚನೆಗೆ ವನಕ್ಕೆ ಬಂದು ಪೊಸಪೂಗಳನಟ್ತಿಯೊಳಾಯ್ದು ಕೊಯ್ದು ಬೆ ||
ನ್ನನೆ ಬರಲೀ ವನಾಂತರಸರೋವರದಲ್ಲಿಗೆ ಮಿಾಯಲೆಂದು ಮೆ |
ಲ್ಲನೆ ಬರುತಿರ್ದ ತನ್ಮುನಿಕುಮಾರನನಾಂ ಬಿಡೆ ನೋಡಿದೆಂ ನೃಪಾ ||೩||

ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋ |
ತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದಬ್ಜಜಂ ಮನೋ ||
ಹರಮೆನೆ ಮಾಡಿದೀ ಮೊಗದ ಪೋಲ್ಕೆಗೆ ಮುನ್ ನೆಗಟಿಲ್ ತಗುಳ್ಚಿ ಬಿ |
ತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ ||೪||

ಎಂದು ಭಾವಿಸಿ

ನವಯೌವನದೊಳ್ ಗುಣದೋ |
ಷವಿಚಾರಮನಿಂತು ಮಾಡಲೀಯದ ಭಾವೋ ||
ದ್ಭವನಿಂ ಪರವಶೆಯಾದೆಂ |
ನವಕುಸುಮಾಸವದೆ ಸೊರ್ಕಿದಳಿನಿಯ ತೆಱದಿಂ ||೫||

ನಿಯತೇಂದ್ರಿಯನೊಳ್ ತೇಜೋ |
ಮಯನೊಳ್ ರೂಪೈಕಪಕ್ಷಪಾತದೆ ನೆಱೆ ನೀ ||
ತಿಯನುೞಿದು ಮುನಿಪನೊಳ್ ನಿ |
ರ್ಭಯನಂಗಜನೆನ್ನನಿಂತಿರಲ್ ಸೋಲಿಸುಮೇ ||೬||

ಪಲಬರ್ ಕಾಂತೆಯರೊಲ್ದು ಪೋದರೊಳರೆಂತುಂ ಕಾಂತರೊಳ್ ಬೇಟವ |
ಗ್ಗಲಿಸಲ್ ಕಾಣದೆ ಲಜ್ಜೆಗೆಟ್ಟರೊಳರಿಂತೀ ಲೋಕದೊಳ್ ರೂಪುಗಾ ||
ಣಲೊಡಂ ತೊಟ್ಟನೆ ಲಜ್ಜೆಗೆಟ್ಟಱಿವುಗೆಟ್ಟಿನ್ನಂತೆ ಕಣ್ಗೆಟ್ಟು ಪೇ |
ೞೊಲವಿಂದಿಂತಿರ್ದೆಗೆಟ್ಟರಾರೆನುತುಮತ್ಯೌತ್ಸುಕ್ಯಮಂ ತಾಳ್ದಿದಂ ||೭||

ಅಂತಾಶ್ಚರ್ಯಮಂ ತಳೆದು ಸನ್ನ ಸಾನೆ ಸಂತೈಸಿ

ಎನ್ನೆವರಂ ಸಚೇತನೆಯೆನೆನ್ನೆವರಂ ಲಘುವಾಗದಿರ್ಪೆನೋ |
ಅನ್ನೆಗಮೀಗಳೀಯೆಡೆಯಿನಾಂ ತೊಲಗಿರ್ಪುದು ಕಜ್ಜಮಲ್ಲದಂ ||
ದೆನ್ನಯ ಮನ್ಮಥೋಚಿತವಿಕಾರಮನೀಕ್ಷಿಸಿ ಸೋಲ್ತುಳಕ್ಕಟಾ |
ಎನ್ನದೆ ಶಾಪಮಂ ಕುಡುವನಂತುಟೆ ಕೋಪಿಗಳಲ್ತೆ ತಾಪಸರ್ ||೮||

ಎಂದು ಪೋಗಲುದ್ಯೋಗಂಗೆಯ್ದು ನಿಖಿಳಜನಪೂಜಾರ್ಹರನವಜ್ಞೆಗೆಯ್ಯಲಾಗದೆಂದು

ತೊಳಗುವ ಚಿನ್ನಪೂಗಳಲಕಾವಳಿಯೊಳ್ ಮಿಱುಗಲ್ ಕಪೋಲಮಂ |
ಡಳತಲದೊಳ್ ತಿಱಿಂಬೊಳೆಯೆ ಕೋಮಲಪಲ್ಲವ ಕರ್ಣಪೂರಮಂ ||
ಜಾಳಮಣಿಕುಂಡಲಂ ಪೆಗಲೊಳಾಡೆ ಮರಳ್ದಿವೆಯಿಕ್ಕಿದಾಂ ಮನಂ |
ಗೊಳಿಪ ಮುನೀಂದ್ರನಾನನಮನೀಕ್ಷಿಸುತುಂ ಪೊಡವಟ್ಟಳಕ್ಕಱಿಂ ||೯||

ತದನಂತರಂ

ಮದನಂ ದುರ್ಜಯನಿಂದ್ರಿಯಂಗಳನಿವಾರ್ಯಂಗಳ್ ವಸಂತಂ ಮದ |
ಪ್ರದನಾ ಸ್ಥಾನವತೀವರಮ್ಯಮೆನಗಂ ದುಃಖಂಬರಲ್ವೇೞ್ಕುಮು ||
ಪ್ಪುದಱಿಂ ಭಾವಿಸಿ ಮದ್ವಿಕಾರಮನೆ ನೋಡುತ್ತಿರ್ಪುದುಂ ಗಾಳಿಗೊ
ಡ್ಡಿದ ದೀಪಾಂಕುರದಂತೆ ತನ್ಮುನಿಯುಮಂ ಕಾಮಂ ಚಲಂ ಮಾಡಿದಂ ||೧೦||

ಅಂತು ಮಾಡೆ

ಪೆಸರೇನಾರ್ಗೀತನೀ ಜವ್ವನಿಗ ತಪಸಿ ತೊಟ್ಟಿರ್ಪ ಕರ್ಣಾವತಂಸಂ |
ಪೊಸತೀ ಲೋಕಕ್ಕಿದಾವಂಘ್ರಿಪದ ಪೊಳೆವ ಪೂಗೊಂಚಲಿಂದಾದುದೋ
ನೀಂ||

ಬೆಸಸಲ್ವೇಟ್ಕಿಂತಿದಂ ಕೌತುಕಮನೆನಗೆನುತ್ತುಂ ನಮಸ್ಕಾರಪೂರ್ವಂ |
ಬೆಸಗೊಂಡೆಂ ತನ್ಮುನೀಂದ್ರಾನುಚರಮುನಿಯನಾನಂದತಿಪ್ರೀತಿಯಿಂದಂ ||೧೧||

ಅಂತು ಬೆಸಗೊಳೆ

ಬೆಸಗೊಳ್ವುದಜಿಂದಿವನು |
ಪ್ಪೆಸಮಾವುದು ತರುಣಿ ನಿನಗೆ ಕೌತುಕಮೆನೆ ಕೇ ||
ಳುಸಿರ್ದಪೆನೆಂದಾ ಮುನಿಪಂ |
ನಸುನಗುತುಂ ಪೇಟಲಾಗಳುದ್ಯತನಾದಂ ||೧೨||

ಅದೆಂತೆನೆ ಶ್ವೇತಕೇತು ಮಹಾಮುನಿಗಂ ಲಕ್ಷ್ಮಿಗಂ ಕುಮಾರಂ ಪುಂಡರೀಕನೆಂಬೊನೀತಂಗೆ ಶೈಶವಂ ಪತ್ತುವಿಡಲೊಡಮಖಿಳವಿದ್ಯಾಕಲಾಪದೊಳ್ ಪರಿಣತನಂ ಮಾಡಿ ಯತಿತ್ವಮಂ ಕಯ್ಕೊಳಿಸೆ ತದನುಷ್ಠಾನಪರಾಯಣನಾದ ಮಹಾನುಭಾವನೀತಂಗೀ ವ್ರತವಿರುದ್ಧಮಪ್ಪ ಕುಸುಮಮಂಜರಿಯೆಂತು ಬಂದುದೆಂಬೆಯಪ್ಪೊಡೆ

ಇಂದು ಚತುರ್ದಶಿಯಪ್ಪುದ |
ಱಿಂದಂ ಕೈಲಾಸವಾಸಿಯಂ ಕಾಣಲ್ಕಾ ||
ನಂದದೆ ದಿವದಿಂದಿರ್ಬರು |
ಮೊಂದಾಗಿ ಬರುತ್ತುಮಿರ್ಪುದುಂ ತತ್ಕ್ಷಣದೊಳ್ ||೧೩||

ವನದೇವತೆಯೊರ್ವಳ್ ಬಂದು ಪೊಡವಟ್ಟು ಭುವನತ್ರಯಾಭಿರಾಮಮಪ್ಪ ನಿನ್ನ ಸೌಕುಮಾರ್ಯಕ್ಕೆ ತಕ್ಕಲಂಕಾರಮಿಾ ದಿವ್ಯಕುಸುಮಮಂಜರಿಯನವತಂಸಂ ಮಾಡಿ ಪಾರಿಜಾತಜನ್ಮಮಂ ಸಫಲಂಮಾಳ್ಪುದೆಂದು ಬಿನ್ನವಿಸೆ ನಿಜರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ ಮತ್ತಂ ಬೆನ್ನನೆ ಪತ್ತಿಬರುತಿರ್ಪುದುಮಾಂ ಕಂಡು ಕಾರುಣ್ಯದಿಂದೀ ಕಾಂತೆಗೆ ಸಂತೋಷಂಮಾಡಿ ಮನಲಿದೇಕೆ ಬೇಡವೇಡೆನೆಯುಂ ಕಿವಿಯೊಳ್ ತೊಡರ್ಚಿ ಪೋದಳೀ ಕುಸುಮಮಂಜರಿಯನೆಂದು ಸಹಚರಮುನಿ ಪೇಟೆ ಪುಂಡರೀಕಂ ಮರಹಸಿತಾಧರಕಪೋಲತಲನಾಗಿ

ಎಳಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀ ಸುತ್ತಿದೇಕೆಂದು ಸಂ |
ಚಳಿಸುತ್ತುಂ ನಿಜಕರ್ಣದಿಂ ತೆಗೆದು ಸೋಲ್ತೆಂ ಕೂಡು ನೀನೆನ್ನೊಳಿಂ ||
ದಳಿಮಾಲಾರವದಿಂದೆ ಪೇೞ್ವ ತೆಱದಿಂ ಮತ್ಕರ್ಣದೊಳ್ ತಾರಕೋ |
ಜ್ಜ್ವಳಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ ||೧೪||

ಇಂ ಪೇೞ್ವುದೇನನೆನ್ನ ಕ |
ದಂಪಿನ ನಸುಸೋಂಕಿನೊಂದು ಸುಖದಿಂದಾದಂ ||
ಕಂಪಿಸುತಿರೆ ಕರತಳದಿಂ |
ದಂ ಪೋದತ್ತಕ್ಷಮಾಲೆ ನಾಣ್ಬೆರಸಾಗಳ್ ||೧೫||

ಅಂತು ಪೋದೊಡಮಱಿಯದಿರಬಾರಾ ಅಕ್ಷಾವಳಿಯಂ ನೆಲಕೆ ಬೀೞ್ವ ನಂ ಪಿಡಿದು ತೊಳಗುವ ಹಾರಮಂ ತಳೆವಂತೆ ಕೊರಲೊಳ್ ತಳೆದು ಸುಖಮಂ ತಳೆಯಲಿಂತಾ ವ್ಯತಿಕರದೊಳೆನ್ನಂ ಛತ್ರಧಾರಿಣಿ ನೋಡಿ

ತಡೆದಿರಲಾಗದಿಂತು ಮೊಗಮಜ್ಜನಮಂ ನೆಱೆ ಮಾಡಿ ದೇವಿಯರ್ |
ನಡೆಗೊಳಲಿರ್ದಪರ್ ಮನೆಗೆ ಮಜ್ಜನಕೀಗಳೆ ರಾಜಪುತ್ರಿ ನೀಂ ||
ನಡೆವುದೆನುತ್ತುಮಿಚ್ಚೆಯುಣಮಿಲ್ಲದೊಡಂ ತೆಗೆದಳ್ ಕರಂ ಮನಂ |
ಕಿಡೆ ಪೊಸತಪ್ಪದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ ||೧೬||

ಅಂತವಳೆನ್ನನೆಂತಾನುಂ ತೆಗೆಯಲೊಡನೆಯೆ ಕುಮಾರನಾತನ ಧೈರ್ಯ ಸ್ಖಲನೆಯಂ ನೋಡಿ

ಎನಗನುರೂಪಮಲ್ತಿದು ನಿಕೃಷ್ಟಜನೋಚಿತ ಮಾರ್ಗಮೆಂಬಿದಂ |
ಮನದೊಳಣಂ ವಿಚಾರಿಸದೆ ಸ್ವೈರಣೆಗೆಟ್ಟೆಱೆವೆತ್ತವೋದುದೆಂ ||
ಬಿನಮೆರ್ದೆಗೆಟ್ಟು ಮೆಯ್ಯಱಿಯದಂತಿರಲಕ್ಕುಮೆ ಪುಂಡರೀಕ ಭೋಂ |
ಕನೆ ನಿನಗೀಗಳಿಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ ||೧೭||

ಎಲ್ಲಿತ್ತೊ ಧೈರ್ಯಮುಪಶಮ |
ಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ ||
ಎಲ್ಲಿತ್ತೊ ನಿನ್ನ ಶೌರ್ಯಮ |
ದೆಲ್ಲಿತ್ತು ಪಭೋಗ ರಾಗವಿಷಯ ದ್ವೇಷಂ ||

ಅತಿಶಯದಿಂ ವಿಷಯಾಸ |
ಕ್ತತೆ ನಿನ್ನನ್ನರುಮನಿಂತು ಮಾಡಿತ್ತೆನಲಿನ್ ||
ಮತಿ ನಿಷ್ಫಲಮಾಗಮ ಸಂ |
ತತಿ ನಿರ್ಗುಣಮಱಿವು ನಿಷ್ಪ್ರಯೋಜನಮಲ್ತೇ ||೧೯||

ಎಂತು ಗಡ ನಿನ್ನ ಕಯ್ಯಿಂ |
ದಂ ತೊಟ್ಟನೆ ಬಿಟ್ದ ಜಪದ ಮಣಿಯುಮನೆಲೆ ಮುಂ ||
ದಂತುಯ್ಯಲಱಿಯೆಯೆನಲಿ |
ನ್ನಿಂತಿರೆ ನಿನ್ನಂತೆ ವಿಗತಚಿತ್ತರುಮೊಳರೇ ||೨೦||

ಅದಱಿನಿನ್ನಾದೊಡಂ ನಿನ್ನ ಮನಮಂ ನೀಂ ನಿಲಿಸಿಕೊಳ್ಳೆಂದು ನುಡಿಯೆ ಲಜ್ಜಿತನಾದಂತೆ ಗೆಯ್ದು

ಬೆಸೆದು ಕಪಿಂಜಲ ನೀಂ ಭಾ |
ವಿಸದಿರ್ ಬೇಱೊಂದು ತೆಱನನವಳೆನ್ನಂ ವಂ ||
ಚಿಸಿದಪರಾಧಮನಾಂ ಸೈ |
ರಿಸುವೆನೆ ನೋಡೆನುತುಮೆಟ್ದು ಪುಸಿಮುಳಿಸಿಂದಂ ||೨೧||

ಕುಡು ಚಪಳೆ ಜಪದ ಮಣಿಯಂ |
ಕುಡಿದಿನ್ನೊಂದಡಿಯನಪ್ಪೊಡಂ ಪೋಗದಿರೆಂ ||
ದೊಡೆ ಕೇಳ್ದು ಜಪದ ಮಣಿಗೆ |
ತ್ತೊಡನೆಯೆ ಹಾರಮನೆ ತೆಗೆದೆನೆನ್ನಯ ಕೊರಲಿಂ ||೨೨||

ಅಂತು ತೆಗೆದು ಕುಡುವುದುಮಾತನುಂ ಮನ್ಮುಖಾಸಕ್ತ ದೃಷ್ಟಿಯಿಂ ಮಯ್ಯಱಿಯದಕ್ಷಾವಳಿಗೆತ್ತು ಕಳೆದುಕೊಳ್ವುದುಮಾನಾಗಳಲ್ಲಿಂ ತಳರ್ದು

ಕಳವಳಿಸಿ ಬೆಮರ್ತಾಗಳ್ |
ಕೊಳದೊಳ್ ಮಿಾಯಲ್ಕತಿಪ್ರಯತ್ನದಿನುಯ್ದರ್ ||
ಕೆಳದಿಯರೆಂತಾನುಂ ತೆಗೆ |
ದಳವಿಲ್ಲದೆ ಬಂದ ನದಿಯನಿದಿರೇಱುವವೊಲ್ ||೨೩||

(ನಾಗವರ್ಮ-ಕಾದಂಬರಿ)

# ೧೧. ಚಂದ್ರಾಪೀಡ ಕಾದಂಬರಿಯರ ಪ್ರಥಮ ಸಮಾಗಮ

[ಮಹಾಶ್ವೇತೆ] ಚಂದ್ರಾಪೀಡನನಿಂತೆಂದಳ್

ಇದೆ ಸಾರಿರ್ಪುದು ರಾಜಧಾನಿ ಪಿರಿದುಂ ಚಿತ್ರಾವಹಂ ಬಂದು ನೋ |
ಟ್ಪುದು ನೀನೆನ್ನೊಡಸಂದು ಮತ್ಸಖಿಗಮೆಂತುಂ ಬುದ್ಧಿವೇಳ್ಪಿ ವೇ ||
ಟ್ಪುದು ಮತ್ಪ್ರಾಣಸಮಾನೆಯಾಕೆ ನಿಜದಿಂದಸ್ವಸ್ಥೆ ಗಂಧರ್ವಲೋ |
ಕದೊಳಿಂದಕ್ಕೆ ಭವದ್ವಿಲೋಕನಸುಖಂ ಭೂಪಾಲವಿದ್ಯಾಧರಾ ||೧||

ಆದಲ್ಲದೆಯುಂ ಮದೀಯಪ್ರಾರ್ಥನೆಯಂ ನಿರರ್ಥಕಂ ಮಾಡದಿಂದು ಬಂದಲ್ಲಿ ವಿಶ್ರಮಿಸಿ ನಾಳೆ ಬೀಡಿಂಗೆ ಬಿಜಯಂಗೆಯ್ವುದೆಂದು ಮತ್ತಮಿಂತೆಂದಳ್

ನಿನ್ನನಕಾರಣಬಾಂಧವ |
ನಂ ನೋಡಿಯೆ ಶೋಕವಾಱಿದುದು ಸುಜನರ ಲೋ ||
ಕೋನ್ನತರ ಪರಹಿತರ ನಿ |
ಪ್ಪ್ರನ್ನರ ಬರವಾರ್ಗೆ ಸುಖಮನುತ್ಪಾದಿಸದೋ ||೨||

ಎಂದು ನುಡಿದೊಡೆ

ಇನಿತಂ ಪ್ರಾರ್ಥಿಸಲೇಂ ನೀ |
ನಿನಿತೆಸಗುವುದೆಂದು ಬೆಸಸುವುದು ಸಾಲ್ಗುಂ ನೀ ||
ಮೆನಗೇದು ವಿನಯದೊಳ್ ಕಾ |
ಮಿನಿ ಪಿಂತನೆ ನಡೆದನಂದು ಚಂದ್ರಾಪೀಡಂ ||೩||

ಅಂತು ಬರುತ್ತುಂ ಹೇಮಕೂಟಮನೆಯ್ದಿ ವಿಚಿತ್ರಮೆನಿಸಿದ ಚಿತ್ರರಥರಾಜಧಾನಿಯಂ ಪೊಕ್ಕು ಸಪ್ತಕಕ್ಷ್ಯಾಂತರಂಗಳ ಕಾಂಚನಮಯತೋರಣಂಗಳಂ ನುಸುಳ್ದು ಕನ್ಯಾಂತಃಪುರದ್ವಾರಮನೆಯ್ದಿ ವರ್ಪಾಗಳ್

ಇದು ನಾರೀಮಯಮಪ್ಪ ಲೋಕಮಿದು ಬೇಱೊಂದಂಗನಾದ್ವೀಪಮಿಂ |
ತಿದು ನಿಷ್ಪೂರುಷಜೀವಲೋಕಮಿದು ಸರ್ಗಕ್ಕೊಂದು ಪದ್ಮೋದ್ಭವಂ ||
ಸುದತೀರತ್ನಸಮೂಹಮಂ ಪದಪಿನಿಂ ಬಯ್ಚಿಟ್ಟ ಭಂಡಾರಮು |
ಪ್ಪುದೆನಲ್ ಸಂದಣಿಸಿರ್ದ ಸುಂದರಿಯರಂ ಕಂಡಂ ನರೇಂದ್ರಾತ್ಮಜಂ ||೪||

ಎರಡುಂ ಪಕ್ಕದೊಳೋಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋ |
ತ್ಕರರತ್ನಾಭರಣ ಪ್ರಭಾಪ್ರಸರವಾದಂ ತಳ್ತು ತದ್ವೀಥಿಕಾಂ ||
ತರದೊಳ್ ಪೆರ್ಬೊನಲಂದದಿಂ ಪರಿಯೆ ಕಂಪಂತಾ ಪ್ರಭಾಪೂರದೊಳ್ |
ಭರದಿಂ ತಾನಿದಿರೀಸುವಂತೆ ನಡೆದಂ ಭೂಪಾಲವಿದ್ಯಾಧರಂ ||೫||

ಪೊಳೆಯುತ್ತಿರ್ಪ ಮಹಾವರಾಹವದನೋದ್ಯದ್ದಂಷ್ಟ್ರಮಂ ನೆಮ್ಮಿ ನಿಂ |
ದಳೊ ಭೂಕಾಂತೆಯೆನಲ್ಕೆ ನೀಲವಸನಪ್ರಚ್ಛನ್ನ ಪರ್ಯಂಕಮಂ ||
ಡಳದೊಳ್ ಬೆಳ್ಪೆಸೆದಿರ್ದ ಕೌಳುಡೆಯನೊಂದಂ ನೆಮ್ಮಿ ಕುಳ್ಳಿರ್ದ ಕೋ |
ಮಳೆಯಂ ದೂರದೆ ನೋಡಿ ಕಂಡನರಸಂ ಕಾದಂಬರೀದೇವಿಯಂ ||೬||

ಅಂತಿರ್ದ ಗಂಧರ್ವರಾಜನಂದನೆಯನತಿದೂರದೊಳ್ ವಿಸ್ಮಿತಾಂತರಂಗನಾಗಿ ನೋಡಿ

ಇವಳಂ ನೋಡಲ್ ಪಡೆದೆ |
ನ್ನ ವಿಲೋಚನವಾವ ನೋಂಪಿಯಂ ನೋಂತುವೊ ಮಾ ||
ಯ್ದ ವಿಧಾತ್ರನೇಕೆ ವಿರಚಿಸ |
ನೊ ವಿಲೋಚನಮಯಮೆನಲ್ ಮದಿಂದ್ರಿಯಚಯಮಂ ||೭||

ಬಗೆಯೊಳ್ ಪಿರಿದುಂ ಕೌತುಕ |
ಮೊಗೆಯಲ್ಕನ್ಯೋನ್ಯಮೊಲ್ದು ನೋಡುತ್ತಿರ್ಪ ||
ನ್ನೆಗಮೊರ್ವೊರ್ದಲಿರ್ವರ ದಿ |
ಟ್ಟಿಗಳುಂ ಸಮದಿಟ್ಟಿಯಾದುವಂತಾ ಕ್ಷಣದೊಳ್ ||೮||

ಅಂತು ನೋಡಿ

ಈತಂ ಕೇಯೂರಂ ಪೇ |
ಬ್ಬಾತಂ ಪುಗುತರ್ಪನೆಂದೆನುತ್ತುಂ ತದ್ರೂ ||
ಪಾತಿಶಯಕ್ಕಚ್ಚರಿವ |
ಟ್ಟಾ ತರುಣಿಯುಮಂತೆ ಬಿಡದೆ ನೋಡುತ್ತಿರ್ದಳ್ ||೯||

ಒದವೆ ಪುಲಕಾಂಕುರಂಗಳ್ |
ಮೊದಲೊಳ್ ಭೂಷಣದ ರವಮೆರಡನೆಯ ಸೂಳ್ ಮು ||
ನ್ನಿದಿರೇಳ್ ತಾಂ ಬಳಿಕ್ಕಿರ |
ದಿದಿರೆಟ್ದಳ್ ತರಳನಯನೆ ಸಂಭ್ರಮದಿಂದಂ ||೧೦||

ಪಲವು ದಿವಸಕ್ಕೆ ಕಂಡೊಗೆ |
ದೊಲವಿಂ ಬಿಗಿಯಪ್ಪಿದಳ್ ಮಹಾಶ್ವೇತೆಯನಾ ||
ಲಲನೆ ಮಹಾಶ್ವೇತೆಯುಮಾ |
ಲಲನೆಯನನುರಾಗದಿಂದಮಪ್ಪಿದಳಾಗಳ್ ||೧೧||

ಅನಂತರಂ ಮಹಾಶ್ವೇತೆ ಕಾದಂಬರಿಯನಿಂತೆಂದಳ್ ಚಂದ್ರಾಪೀಡನೆಂಬೀ ಮಹಾನುಭಾವಂ ಭಾರತವರ್ಷದ ರಾಜನುಂ ಕ್ಷಪಿತ ಪ್ರಜಾಪೀಡನುಮೆನಿಸಿದ ತಾರಾಪೀಡನರೇಂದ್ರಂಗೆ ನಂದನಂ ದಿಗ್ವಿಜಯ ಪ್ರಸಂಗದಿಂ ಬಳಿಸಂದೀ ಪ್ರದೇಶಕ್ಕೆ ಬಂದನಲ್ಲದೆಯುಂ ಪರಿತ್ಯಕ್ತಸಕಲಸಂಗೆಯಾಗಿ ಕಲ್ಲೆರ್ದೆಯಳೆನಿಸಿದೆನ್ನಂ ಕಾಣಲೊಡನೆ ಸ್ವಭಾವಸರಳತೆಯನಪ್ಪುಕಯ್ದು ನಿಜಗುಣದಿಂ ನಿಷ್ಕಾರಣ ಬಂಧುವುಂ ನಿರ್ನಿಮಿತ್ತಮಿತ್ರನುಮೆನಿಸಿದನೀ ಮರ್ತ್ಯಲೋಕದ ಸಫಲತೆಯುಮಂ ಸೌಭಾಗ್ಯದ ಭಾಗ್ಯಮುಮಂ ಮನುಷ್ಯರಗ್ರಾಮ್ಯತೆಯುಮಂ ನೀನುಂ ಕಾಣ್ಬೆಯೆಂದೆಂತಾನುಮಿಲ್ಲಿಗೊಡಗೊಂಡು ಬಂದೆಂ

ಅರಸನನಾಂ ಕಂಡಱಿಯೆಂ |
ಪರಿಚಯಮಿಲ್ಲೆನ್ನೊಳೆಂದು ಮಿಗೆ ತಾಂ ನಾಣ್ಚು ||
ತ್ತಿರದಿಂದೆನ್ನೊಳದೆಂತಂ |
ತಿರೆ ನೀಂ ನೆಗಟ್ಟುದು ನಿರಂತರಂ ಕಮಲಮುಖೀ ||೧೨||

ಎಂದು ಮಹಾಶ್ವೇತೆ ಕಾದಂಬರಿಗಱುಪುವುದುಂ ಚಂದ್ರಾಪೀಡನುಂ ಕಯ್ಗಳ್ ಮುಗಿಯೆ ಸರ್ವಾಂಗಪುಳಕಮಂ ತಳೆದು

ಪಿರಿದೊಂದಟ್ಕಱೊಳೊಲ್ದು ನೋಟ್ಪವಳ ದೀರ್ಘಾಪಾಂಗದೇಶಕ್ಕೆ ಚೆ ।
ಚ್ಚರಮಾಗಳ್ ಪರಿತಂದ ಸೇದೆಯೊದವಲ್ ಘರ್ಮೋದಬಿಂದೂತ್ಕರಂ ॥
ಸುರಿಯುತ್ತಿರ್ಪುದು ಕಣ್ಣ ಪಾಪೆಗೆಲೆ ನೋಡೆಂಬಂದದಿಂ ಸ್ನೇಹನಿ ।
ರ್ಭರವಾ ಕಾಂತೆಗೆ ಭೋಂಕೆನಲ್ ಸುರಿದುವಾನಂದಾಶ್ರುಬಿಂದೂತ್ಕರಂ ॥೧೩॥

ಅನಂತರಂ ಪರಿಜನಂ ಸಂಭ್ರಮಂಬೆರಸು ತಂದು ಶಯನತಳಶಿರೋಭಾಗ ದೊಳಿಕ್ಕಿದ ಹೇಮುಪದಾಂಕಿತಾಸನದೊಳರಸಂ ಕುಳ್ಳಿರೆ ಕಾದಂಬರಿ ಮಹಾ ಶ್ವೇತೆಯೊಡನೆ ನಿಜಪರ್ಯಂಕದೊಳ್ ಕುಳ್ಳಿರ್ಪುದುಂ ಮಹಾಶ್ವೇತೆಯ ಕಣ್ಣ ಱಿದು ವೇಣುರವಂಗಳುಮಂ ವೀಣಾನಾದಂಗಳುಮಂ ಗೀತಸ್ವನಂಗಳುಮಂ ಮಾಗಧಿಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತುಮಿರ್ದ ರನ್ನೆಗಂ

ಪ್ರಿಯದಿಂ ಕಾಂತೆ ಮಹಾಶ್ವೇ ।
ತೆಯ ಕಾಲಂ ತಾನೆ ಕರ್ಚಿ ಪದಪಿಂದೆ ನಿಜ ॥
ಪ್ರಿಯಸಖಿಯೆನಿಸಿದ ಮದಲೇ ।
ಖೆಯೆಂಬಳಿಂ ನೃಪನ ಕಾಲ್ಗಳಂ ಕರ್ಚಿಸಿದಳ್ ॥೧೪॥

ಅನಂತರಂ ತಾಂಬೂಲಪ್ರದಾನೋದ್ಯತೆಯಾದ ಕಾದಂಬರೀದೇವಿಯುಂ ಮಹಾಶ್ವೇತೆಯಿಂತೆಂದಳ್

ಭುವನಾಧೀಶ್ವರಸುತನಭಿ ।
ನವಾಗತಂ ಮಾನ್ಯನಪ್ಪನಾರಾಧ್ಯನೆ ದಲ್ ॥
ನವಗೆಲ್ಲ ತೆಱದಿನದಱಿಂ ।
ದವೀವುದರಸಂಗೆ ಮುನ್ನಮೀ ತಂಬುಲಮಂ ॥೧೫॥

ಎಂದು ನುಡಿಯೆ

ಆನಕ್ಕ ನಾಣ್ಚುವೆಂ ಪಿಡಿ |
ನೀನೆ ನೃಪಂಗಿಕ್ಕು ತಂಬುಲಮನಱಿವೆನೆ ಪೇ ||
ಬೇನುಮನಾನೆಂದತಿ ಲ |
ಜ್ಜಾನತಮುಖಿಯಾಗಿ ಕಾಂತೆ ಮೆಲ್ಲನೆ ನುಡಿದಳ್ ||೧೬||

ಅಂತು ನುಡಿಯೆ ಮಹಾಶ್ವೇತೆ ಮತ್ತಮಾಗ್ರಹಿಸೆ ತಂಬುಲಂಗುಡಲುಜ್ಜುಗಂಗೆಯ್ದು

ಬೆಮರಿಂ ಮುಟುಗಿದಪೆಂ ಸಂ |
ಭ್ರಮದಿಂ ಬಿಟ್ಟಪ್ಪೆನರಸ ಕಯ್ಗುಡು ನೀಂ ಬೇ ||
ಗಮೆನಿಪ್ಪ ತೆಱದೆ ತಾಂಬೂ |
ಲಮಿಳಿತಮಂ ಕಾಂತೆ ನೀಡಿದಳ್ ನಿಜಕರಮಂ ||೧೭||

ಆಗಳ್ ಪಂಚೇಂದ್ರಿಯವೃತ್ತಿಗಳ್ ಬೇಱೆ ಬೇಱೆ ರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳಂ ಚಂದ್ರಾಪೀಡಂ ನೀಡೆ

ಎನಸುಂ ಮುಂದೆ ನಖಾಂಶು ನಿಳ್ಕೆ ನೃಪಹಸ್ತಾನ್ವೇಷಣಂಗೆಯ್ವವೋಲ್ |
ನಿನಗೆನ್ನಂ ಬಿಡದುಣ್ಮದೀ ಬೆಮರೆ ಕಯ್ನೀರಾಗಲ್ ತೋರ್ಕೆಗೊ ||
ಟ್ಟನನಂಗಂ ಪಿಡಿ ನಿನ್ನ ಕಯ್ಯೆಡೆಯನೊಂದಿರ್ದಪ್ಪುದಿನ್ನೆನ್ನ ಜೀ |
ವನವೆಂಬಂದದಿನಿಕ್ಕಿದಳ್ ನಡುಗುತುಂ ತನ್ವಂಗಿ ತಾಂಬೂಲಮಂ || ||೧೮||

[ನಾಗವರ್ಮ-ಕಾದಂಬರಿ]

# ೧೨. ರಾವಣನ ಪರಾಂಗನಾ ವಿರತಿ

ನಳಕೂಬರನ ಕುಲಾಂಗನೆ |
ವಿಳಾಸವತಿ ರಾವಣಂಗೆ ಪಲಕಾಲಂ ಮು ||
ನ್ನೆಳಸಿರ್ಪ ಕಾಮಕಾತರೆ |
ಕೇಳದಿಗೆ ತಿಳಿವಂತು ತನ್ನ ತೆಱನಂ ಪೇೞ್ದಳ್ ||೧||

ಅಂತು ವಿದ್ಯಾಧರ ಪರಮೇಶ್ವರಿ ಚಿತ್ರಮಾಲೆಗೆ ನಿಜಾಭಿಪ್ರಾಯಮಂ ಕಲಿಸಿ ರಾವಣನಲ್ಲಿಗಟ್ಟುವುದುಂ

ನೀಲಪಟಚ್ಛದೆ ನಿಶೆಯೊಳ್ |
ಲೋಲೇಕ್ಷಣೆ ಗಗನಮಾರ್ಗದಿಂ ರಾವಣನಿ ||
ರ್ದಾಲಯಮುಂ ವಿಜಯಶ್ರೀ |
ಲೀಲೆಯಿನಾ ಚಿತ್ರಮಾಲೆ ಬಂದೊಳಪೊಕ್ಕಳ್ || ||೨||

ಅಂತು ಪೊಕ್ಕು ರಾವಣನ ಕೆಲಕ್ಕೆ ವಂದು

ಉಪರಂಭೆಯೆಂಬಳೆಮ್ಮರ |
ಸಿ ಪೋಲಿಪೊಡೆ ರಂಭೆಗಗ್ಗಳಂ ಚೆಲ್ವಿಂದಾ ||
ರುಪಮೆಗೆ ಪೆಱರೆನಿಪಳ್ ಪೀ |
ನ ಪಯೋಧರೆ ನಿನ್ನ ಸಾರ್ಕೆಗಟ್ಟಿದಳೆನ್ನಂ ||೩||

ಪಲವು ದಿನಂ ನಿನ್ನೊಳ್ ತೊ |
ಟ್ಟೊಲವಿಂದಾ ಚೆನ್ನೆ ನಿನ್ನನನವರತಂ ಪಂ ||
ಬಲಿಸುತ್ತುಂ ಚಿತ್ತೋದ್ಭವ |
ನಲರಂಬುಗಳುರ್ಚೆ ನಾಡೆ ಪಾಡೞಿದಿರ್ದಳ್ || ||೪||

ಏವೊಗೞ್ವೆನತನುವಿದ್ಯಾ |
ದೇವತೆ ನಿರತಿಶಯಮೆನಿಪ ರೂಪಿಂ ವಿದ್ಯಾ ||
ದೇವತೆ ಸಾಮರ್ಥ್ಯದಿನೆನಿ |
ಪಾ ವಧು ಬರೆ ದೇವ ನಿನಗೆ ತೀರದುದುಂಟೇ || || ೫ ||

ಎನೆ ದಶಾನನಂ ಪೞಿಯುಂ ಪಾಪಮುಮಪ್ಪ ದುಶ್ಚರಿತ್ರಮನೇವೆನೆಂದು ಮನದೊಳೆ ನಿಶ್ಚಯಿಸಿ ವಿಭೀಷಣನಂ ಬರಿಸಿ ರಹಸ್ಯದೊಳದನಱಿಪುವುದುಮಾತಂ ವಿದ್ಯಾಪ್ರಾಕಾರಮಂ ಕಿಡಿಸುವಂತುಟಂ ಪ್ರತಿವಿದ್ಯೆಯ ನಾಕೆಯುಂ ಬರಿಸಿ ಪುಸಿದು ನಂಬಿಸಿ ಕಲ್ತುಕೊಳ್ವುದೆನೆ ರಾವಣನಾ ದೂದವಿಗೆ ಸನ್ನೆ ನುಡಿಗೊಡಂಬಟ್ಟನಾಕೆಯುಂ ತಾಯೆಂದು ವಕ್ರೋಕ್ತಿಯಿಂ ನುಡಿವುದುಮಾ ಕ್ಷಣದೊಳೆ ಪೋಗಿ ಬೇಗಂ ತರ್ಪುದುಮುಪರಂಭೆಗೆ ಪುಸಿನಣ್ಪುದೋಱಿ ನಿನಗಮೆನಗಂ ದುರ್ಲಂಘ್ಯಪುರದೊಳ್ ಕೂಟಮಪ್ಪಂತು ಮಾಡೆನೆ ಮನದೆ ಕೊಂಡಂತೆಗೆಯ್ವೆನೆಂದು ಸಾಲ ವಿದ್ಯಾಭೇದಿನಿಯಂ

ಪ್ರತಿವಿದ್ಯೆಯನಾಕೆ ಕುಲ |
ಕ್ಷತಿಯಂ ಪತಿಗಪ್ಪ ಹಾನಿಯಂ ಬಗೆಯದೆ ದು ||
ರ್ಮತಿ ಕೊಟ್ಟಳದೆನ್ನರುಮಂ |
ಮತಿಗಿಡಿಪುದು ಚೋದ್ಯಮಲ್ತು ಮದನೋನ್ಮಾದಂ || ೬ ||

ಅಂತಾಕೆಯ ಕಯ್ಯೊಳಾವಿದ್ಯೆಯಂ ಕೊಂಡು ಕೞಿಪಿ ಮಱುದಿವಸಂ ಸಾಲವಿದ್ಯೆಯಂ ಪ್ರತಿವಿದ್ಯೆಯಿಂ ಕಿಡಿಸಿ ದುರ್ಲಂಘ್ಯಪುರಮಂ ರಾವಣಂ ಮುತ್ತುವುದುಂ

ಸೆರಗಂ ಬೆರಗಂ ಬಗೆಯದೆ|
ಪುರಮಂ ಪೊಱಮಟ್ಟು ಕಾದುವಾಗಳ್ ನಳಕೂ ||
ಬರನಂ ವಿಭೀಷಣಂ ಮದ |
ಕರಿಯಂ ಮೃಗಶತ್ರು ಪಿಡಿವ ತೆಱದಿಂ ಪಿಡಿದಂ || ೭ ||

ಆ ಸಮಯದೊಳ್

ದನುಜಾಧೀಶ್ವರನ ಪುರಾ ।
ತನ ಪುಣ್ಯದ ಫಲದಿನಾಯುಧಾಗಾರದೊಳೀಂ ॥
ಜನಿಯಿಸಿದುದೊ ವಿದ್ವಿಷ್ಟಾ ।
ವನಿಪಾಲ ಪ್ರಳಯ ಕಾಲಚಕ್ರಂ ಚಕ್ರಂ ॥ ೮ ॥

ಅಂತು ಸುದರ್ಶನಚಕ್ರಂ ಪುಟ್ಟುವುದುಂ ರಾವಣಂ ಮಹೋತ್ಸವದಿಂ ಚಕ್ರಪೂಜೆಯಂ ಮಾಡಿ ರಹಸ್ಯದಿಂದಾಕೆಯಂ ಕರೆದು ಸೀನ್ ವಿಶುದ್ಧ ಕುಲದ ಕುಶಧ್ವಜಂಗಂ ಮಧುಕಾಂತೆಗಂ ಪುಟ್ಟಿದುದಱಿಂ ನಿಜ ಕುಲಾಚಾರಮಂ ಬಗೆದು ಶೀಲಪರಿಪಾಲನಂ ಮಾಟ್ಪುದಂತಲ್ಲದೆಯುಂ ನೀನೆನಗೆ ವಿದ್ಯೋಪದೇಶಂಗೆಯ್ದುದಱಿಂ ಗುರುವಾದೆ ಪೆಱತೇನುಮಂ ಬಗೆಯದೆ ನಳಕೂಬರನೊಳ್ ಕೂಡಿಸುಖಮಿರೆಂದಾಕೆಯ ದುಷ್ಪರಿಣಾಮಮಂ ಪತ್ತುವಿಡಿಸಿ

ನಳಕೂಬರನುಮನಾಕ್ಷಣ ।
ದೊಳೆ ಬರಿಸಿ ನಿಜಾಗ್ರತನಯನಿಂದಗಿಯಿಂದ ॥
ಗ್ಗಳಮೆನೆ ಮನ್ನಿಸಿ ಭಯಮಂ ।
ಕಳೆದಿತ್ತಂ ಭೃತ್ಯಪದವಿಯಂ ದಶವದನಂ ॥ ॥ ೯ ॥

(ನಾಗಚಂದ್ರ - ರಾಮಚಂದ್ರಚರಿತ ಪುರಾಣ)

---

# ೧೩. ಸೀತಾಪಹರಣ

ಅಳಿಪಿ ಪರವಧುಗಧೋಗತಿ ।
ಗಿೞಿವುದನಭಿನಯಿಸುವಂತೆ ಸೀತೆಯ ಸಾರ ॥
ಣ್ಗಿೞಿದಂ ನಭದಿಂ ಖಚರಂ ।
ಪೞಿಗಂ ಪಾಪಕ್ಕಮಂಜದವರೇಗೆಯ್ಯರ್ ॥ ೧ ॥

ದೋಃಷಿ ಪಿಡಿವಂತೆ ದಿವ್ಯದ|
ಕಾಸಿದ ಕುಱುವಂ ಕಡಂಗಿ ಕಾಳೋರಗನಂ ||
ಕೂಸು ಪಿಡಿವಂತೆ ಪಿಡಿದಂ |
ಸಾಸಿಗನವಿವೇಕಿ ಸೀತೆಯಂ ದಶಕಂಠಂ || ೨ ||

ಅಂತು ಪಿಡಿದು ನಿಜ ವಿಮಾನದೊಳಿಟ್ಟು

ದಶಮುಖನುನ್ಮುಖನಳಿಪಿಂ |
ಶಶಿಮುಖಿಯಂ ಜನಕಸುತೆಯನಾವರಿಸೆ ಚತು ||
ರ್ದಶಭುವನಮನಪವಾದಂ |
ಶಶಿಕಲೆಯಂ ಸೈಂಹಿಕೇಯನುಯ್ವಂತುಯ್ದಂ || ೩ ||

ಆಗಳದಂ ಕಂಡು ಜಟಾಯು ಕೋಪಾನಲ ವಿಸ್ಫುಲಿಂಗದಂತಾರಕ್ತಂಗಳಾದ ಕಣ್ಗಳಿಂ ನುಂಗುವಂತೆ ನೋಡಿ

ಪತಿ ಕಾಪುವೇಟ್ಟು ಪೋದಂ |
ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡು ||
ದ್ಧತನಂ ಮದೀಯ ತುಂಡಾ |
ಹತಿಯಿಂ ಶತಖಂಡಮಾಗೆ ಮಾಳ್ಪೆನೆನುತ್ತುಂ || ೪ ||

ಖರ ನಖರಂಗಳಿಂ ನಿಶಿತ ಚಂಚುಗಳಿಂದಿಱಿಯಲ್ ಕಱುತ್ತು ಸಾ |
ರ್ಥರೆ ನಪುನಕ್ಕು ಪೊಯ್ಯೆ ಕರದಿಂ ಗಮನೋತ್ಸುಕನಿಂದ್ರವೈರಿ ತ||
ನ್ನೆರಡುಮೆಱಂಕೆಗಳ್ ಮುಱಿದಿಳಾತಳದೊಳ್ ಕೆಡೆದತ್ತು ವಜ್ರದಿಂ |
ಸುರಪತಿ ಪೊಯ್ಯೆ ಬೆಟ್ಟು ಕೆಡದಂತೆ ಜಟಾಯು ನಭೋವಿಭಾಗದಿಂ || ೫ ||

ಮನಮೊಳದಾಗೆ ಮನ್ಯು ಮಿಗೆ ತಳ್ತಿಮೆಯಿಂ ಕರೆಗಣ್ಮಿ ಸೂಸೆ ಕ |
ಣ್ಬನಿ ಗಳ ಕಂದಳಂ ಬಿಗಿಯೆ ಗದ್ಗದ ನಿಸ್ವನಮುಣ್ಮೆ ಹಾ ರವಂ ||
ಜನಿಯಿಸೆ ಸೀತೆ ಭೀತೆ ದೆಸೆಗೆಟ್ಟೆರ್ದೆಗೆಟ್ಟೞಿ ಪೊಣ್ಮಿದತ್ತು ಮಾ |
ರ್ದನಿ ದೆಸೆಯೊಳ್ ದಿಗಂಗನೆಯರುಂ ಬಿಡದಂದೊಡನಟ್ಟಿ ಮಾಱ್ಕೆಯಿಂ || ೬ ||

ಘೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕವಾ |
ತಂಕಮೊಡರ್ಚೆ ಪುಷ್ಪಕ ವಿಮಾನದ ರತ್ನ ವಿಚಿತ್ರ ಪುತ್ರಿಕಾ ||
ಸಂಕುಲಮುಟ್ಟೊಡಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವಾಗಳಾ |
ಲಂಕೆಯ ಸೂಡನುನ್ನತಿಯ ಕೇಡನವಂಗೆ ನಿವೇದಿಪಂತೆವೋಲ್ || ೭ ||

ಬಲೆಗೊಳಗಾದ ಸೋಗೆ ನವಿಲಂತೆ ಭಯಾಕುಲೆ ತನ್ನ ಚಿತ್ತದೊಳ್ |
ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯ ದರ್ಶನ ||
ಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಘುಮುಚ್ಚೆವೋಗಿ ತ |
ಣ್ಣಲರಲೆಪಿಂಪೆ ಮೂರ್ಛೆದಿಳಿದಳ್ ಮಗುಳ್ದಂ ಪೊಱಪೊಣ್ಮೆ ಹಾ ರವಂ || ೮ ||

ಕ್ರೂರಾತ್ಮಂ ವಂಚಕನವಿ |
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ ||
ಹಾ ರಾಮಾ ಹಾ ರಾಮಾ |
ಹಾ ರಾಮಾ ಎಂದು ಸೀತೆ ಬಾಯಟ್ಟಿದಟ್ಟಳ್ || ೯ ||

ಅಂತು ಶೋಕಂಗೆಯ್ವ ಸೀತೆಯಂ ದಶಾಸ್ಯನ್ ಪರಾಂಗನಾ ವಿರತಿ ವ್ರತದ ಭಂಗಮಂ ಬಗೆಯದುಯ್ದನ್

(ನಾಗಚಂದ್ರ – ರಾಮಚಂದ್ರಚರಿತ ಪುರಾಣ)

# ೧೪. ಕಾಮದಹನ

ತನ್ನ ಸರಸದೃಷ್ಟಿಗಳಿಂ ಹರನಂ ನೋಡುತುಂ ತಪೋಭರಮಂ ಬಿಡಿಸಲಿರ್ದ ಮೃಡಾನಿಯಂ ಕುಸುಮಕೋದಂಡಂ ಕಂಡು,

ಇನ್ನಂಜೆನಂಜೆನಾಹಾ|
ಉನ್ನತಬಲವಾಯ್ತೆನುತ್ತೆ ವಿಭ್ರಮಬಳಸಂ||
ಸನ್ನಂ ಕಾಮಂ ತೆಗೆದಂ|
ತನ್ನಗ್ಗದುದಂಚಪಂಚಬಾಣಮನಾಗಳ್ ||೧||

ನಳನಳಿಸುವಿಕ್ಷುಚಾಪದೊ|
ಳಳವಡೆ ನಡೆನೋಡಿ ಹೂಡುತ್ತೈದಂಬಂ ಸಂ||
ಚಳಿಸದ ಶಂಕರನ ಮನಂ|
ಚಳಿಯಿಪುದಂ ಸಾರ್ದು ಪಾರ್ದು ತೆಗೆ ನೆಱೆದಿರ್ದಂ ||೨||

ತೆಗೆದಾಕರ್ಣಾಂಬರಂ ಶಂಬರರಿಪು ನೆಱೆ ಹೂಡಿರ್ದ ಪುಷ್ಪಾಸ್ತ್ರದೊಂದು|
ಜ್ಜುಗಮಾಕಾಶಸ್ಥನಾಕೌಕರೊಳೊದವಿದನೂನಾರ್ತಿ ಕೂರ್ತೆಯ್ದೆ ನಿಂದಿ||
ರ್ಪಗಜಾಚಿತ್ತಾಭಿಲಾಷಾವಿತತಿ ನೆರೆದು ಭೂತೇಶಚಿತ್ತಾಂತದೊಳ್ ಪೊ|
ಕ್ಕು ಗಭೀರೋದ್ಯತ್ ತಪೋಬೀಜಮನತಿಭರದಿಂದೊತ್ತಿ ಮುತ್ತಿತ್ತು ಸುತ್ತಂ ||೩||

ಇಂತು ಮದನನ ಪಂಚಬಾಣಂ ಪರಿತಂದು ನೆರೆದಡಪಿ ಬೆರಸಿ ಕವಿದು ಮನಮನಿರ್ಮೆಯ್ಗೊಂಡು ಸಹಸ್ರಮುಖದಿಂ ಸಂಚಳಮನೀಯೆ ನಿಲಲ್ ಬಾರದೆ ತಪೋಭರದ ಬೆಸುಗೆ ಬಿಡುವಂತೆ ಮೆಯ್ಯ ಸಂಪುಟಂ ಬಿರ್ಚಲೊಡಂ ನೋಡಿ ನೋಡಿ ನೋಡಲಣ್ಮದೆ ಪುಷ್ಪಶರಮಂ ನೂರ್ಮಡಿಸುವಂತೆ ಪುಷ್ಪಾಂಜಲಿಯಂ ಕೊಟ್ಟಂತೆ ಕಂಪಿಸಿ ಮುಂತೆ ಮೆಯ್ಯಿಕ್ಕಿರ್ದ ಗಿರಿಜಾತೆಯುಂ ಭೂತೇಶ್ವರಂ ಕಂಡಾನೇಕೆಯೀ ಮಾನಿನಿಯೇಕೀ ತಪದೊಳಿಲ್ಲಿಯದೆತ್ತಣಿಂ ಬಂದುದಾಂ

ದಾದುದೆಂದು ಕಾಮನಿರ್ಪ ವಾಮಭಾಗಮಂ ನಿಟಿಲಾಕ್ಷಂ ನಸುಗೋಪದಿಂ ನೋಡಿದಾಗಳ್,

ನೋಡದ ಮುನ್ನಂ ಕೋಪಂ |
ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್ ||
ಕೂಡೆ ಬಳೆಬಳೆದು ಸುಳಿಸುಳಿ |
ದೀಡಿಱಿದೊಳಗೊಳಗೆ ಘುಳುಘುಳಿಸಿ ಕುದಿದಾಗಳ್ || ೪ ||

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋಱಿದತ್ತು ಬಾನ್|
ಗೊಗೆದುದು ನಿಂಬು ಪೊಂಬೆಳಗುಮಂ ಪರಪುತ್ತದು ಧಂ ಧಗಿಲ್ ಧಗಿಲ್ ||
ಧಗಿಲೆನುತಟ್ಟತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ|
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ || ೫ ||

ಇಟ್ಟಣಿಸಿ ಘುಡುಘುಡಿಸಿ ಕಿಡಿ |
ಗುಟ್ಟಿ ಕನಲ್ದಡಸಿ ಸಿಡಿಲ ಬಳಗದ ಮುಳಿಸಂ ||
ತೊಟ್ಟುದು ಬಿಸುಗಣ್ಣುರಿ ಪೊಱ |
ಮಟ್ಟುದು ಸುಟ್ಟುದು ರತೀಶನಂ ನಿಮಿಷಾರ್ಧಂ || ೬ ||

ತೊಟ್ಟನೆ ಭಾಳಾನಲನಿರ |
ದೊಟ್ಟಯಿಸಿಯೆ ಕುಸುಮಶರನನುರುಪಿದ ಪದದೊಳ್ ||
ಪುಟ್ಟಿತುಮಂ ಪೋದುದುಮಂ |
ಸುಟ್ಟುದುಮಂ ಕಾಣಬಾರದಾಯ್ತಾ ಕ್ಷಣದೊಳ್ || ೭ ||

ಅಂತುಮಲ್ಲದೆ,

ಅರರೇ ಭುರ್ಭುಗು ಭಾಪುರೇ ಭುಗುಭುಗು ಪ್ರಜ್ವಾಲೆ ಮಜ್ಜಯ್ಯ ದೇ |
ವುರೆ ಮೇಘಾನಲವಿಸ್ಫುಲಿಂಗಮುಮುಮ ಪ್ರದ್ಯೋತವಯ್ಯಯ್ಯ ಭೀ ||
ಕರವಾಹಾ ಛಿಣಿಛಿಳ್ ಛಿಟಿಲ್ ಛಲರೆ ಭಾಳಾಭೀಳವೊಂದೆಂದು ನಿ |
ರ್ಜರಲೋಕಂ ಬೆರ್ಚಿಗಾಗೆ ಸುಟ್ಟುದು ಸುರೂಪಾಕ್ಷಿ ಕಂದರ್ಪನಂ || ೮ ||

ಸಂದಣಿಸಿ ಪತ್ತಿದುರಿ ಘರಿ |
ಲೆಂದುರುಪಿಡೆ ಬೇಗದಿಂಡೆ ಉರಿದಾಕ್ಷಣದೊಳ್ ||
ಬೆಂದ ನುಲಿಯಂತೆ ಮದನಂ |
ನಿಂದಿರೆ ಕಂಡಭವನೆಯ್ದಿ ಮುಳಿದಂ ತುಳಿದಂ ||೯||

ಜಯಶೀಲಂ ಪ್ರಭು ಪಾವಕ |
ನಯನಂ ವಿಷಕಂಠನಹಿವಿಭೂಷಂ ಕೋಪೋ ||
ದಯನಭವಂ ಸ್ಮರಭಸ್ಮಾ |
ವಯವಂ ತಾನಾದನತುಳಬಳನಪ್ರತಿಮಂ ||೧೦||

(ಹರಿಹರ ದೇವ - ಗಿರಿಜಾಕಲ್ಯಾಣ)

---

## ೧೫. ವಿರೂಪಾಕ್ಷ ಪ್ರತ್ಯಕ್ಷ

ಪನ್ನಗಭೂಷಣನ್ ಗಿರಿಜೆಯ ಮನಮನೊರೆದು ನೋಡುವ ಭರದಿಂ,

ದಶಭುಜಮಂ ಪಂಚಾಸ್ಯಮ |
ನಶೇಷಭೀಮಾಂಗವಿತತಿಯಂ ತನುವಿನೊಳಂ ||
ವಶಮಂ ಮಾಡುತಡಂಗಿಸಿ |
ಪಶುಪತಿ ವಟುವೇಷದಿಂದಮೊಪ್ಪುತ್ತಿರ್ದಂ ||೧||

ಮಿಗೆ ಶೀತಾಂಶು ಚಕೋರಿಯಲ್ಲಿಗೆ ವಸಂತಂ ರಾಜಿವುದ್ಯಾನದ |
ಲ್ಲಿಗೆ ಸೂರ್ಯಂ ಸರಸೀಜದಲ್ಲಿಗೆ ವರಪ್ರಾಣಾನಿಳಂ ದೇಹದ ||
ಲ್ಲಿಗೆ ಮೇಘಂ ಶಿಖಿಯಲ್ಲಿಗೊಪ್ಪುವ ಮರಾಳಂ ಪೂರ್ಣಕಾಸಾರದ |
ಲ್ಲಿಗೆ ಬರ್ಪಂತೆ ಭವಾನಿಯಲ್ಲಿಗಭವಂ ಬಂದಂ ಜಗದ್ವಲ್ಲಭಂ ||೨||

ಇಂತು ಭೂಲೋಕಕ್ಕಿಳಿತಂದು ಹೇಮಕೂಟದೊಳ್ ಹೈಮವತಿಯಿರ್ಪ ತಪೋವನಮಂ ಪೊರ್ದಿ ಕಪಟವಟುವೇಷಮಂ ತಳೆದ ಕಪರ್ದಿ ಪಾರ್ವತೀದೇವಿಯರ್ ತಪದೊಳಿರ್ಪ ಸೀಮಾಸಮೀಪದ ವಿಶಾಲಬಾಲಚೂತಶೀತಳಛಾಯೆಯೊಳ್ ಕುಳ್ಳಿರೆ ಸಹಚರಿಯರಪ್ಪ ಜಯೆವಿಜಯೆಗಳ್ ಕಂಡು,

ತರಳನಪೂರ್ವಗನತಿಥಿ |
ಸ್ವರೂಪನೀಳದ್ವಿಭೂತಿಲಸಿತಲಲಾಟಂ ||
ವರವಿಪ್ರನೆನುತೆ ಬಂದಾ |
ದರಿಸಿದರೊಲವಿಂದೆ ಚರಣತಳಮಂ ತೊಳೆದರ್ ||೩||

ಅಂತು ತೊಳೆದು,

ಎಳವಾಳೆಯ ಸುಳಿಯೆಲೆಯೊಳ್ |
ನಳನಳಿಸುವ ಕಂದಮೂಲಮಂ ನವಜಂಬೂ ||
ಫಳವಾಮ್ರಫಳಂ ಕದಳೀ |
ಫಳಂಗಳಂ ತೀವಿ ತಂದು ಮುಂದಿಳಿಪುತ್ತುಂ ||೪||

ಎಲೆಯತಿಥಿ ಬಳಲ್ದಿರಿಮಾ |
ಫಲದಿಂದಂ ನಿಮ್ಮ ಪಸಿವನುಡುಗಿಸಿಯೆನೆ ಹೈ ||
ಫಲವಂ ಕೆಯ್ಕೊಂಡಪೆವೀ |
ಲಲನೆಯದಾರ್ ತಪವಗಣ್ಯವಾವನ ಪುಣ್ಯಂ ||೫||

ಎಂದು ನುಡಿಯೆ ಜಯೆವಿಜಯೆಗಳ್ ಕೇಳ್ದು,

ಇವರಿರವಿನ ಚಿಂತಾರತಿ |
ನಿವಗೇಕೀ ಕ್ಷುಧೆಯನೀ ಪಥಶ್ರಮಮಂ ತೀ- ||
ರ್ಚುವ ಬಗೆಯಂ ಬೇಗಂ ಮಾ- |
ಡುವುದೆನೆ ನಸುನಗುತೆ ವಿಪ್ರನಂದಿಂತೆಂದಂ ||೬||

ಬೆಸಗೊಂಡೊಡೆ ದೋಷಮೆ ಈ |
ಪೊಸಕನ್ನೆ ತಪೋವಿರೋಧದಿಂದಿರ್ದಪಳೆ- ||

ರಿಸಬಪ್ಪುದೆ ತಪಮಂ ಮಾ |
ಣಿಸುವವರಿಲ್ಲಾ ಸಹಾಯಸಂಪದಮಿಲ್ಲಾ ||೭||

ಎನೆ ಕೇಳ್ದು ಗಿರಿಜೆ ವಚನದೊಳ್ |
ಮುನಿಯುತ್ತುಂ ಜಪವನುಡುಗಿ ಜಪಮಾಲೆಯನೊ ||
ಯ್ಯನೆ ಕೆಯ್ಯೊಳೋಸರಿಸಿ ಮೆ |
ಲ್ಲನೆ ಕಣ್ದೆಱೆಯುತ್ತೆ ಕಂಡಳಾ ವರವಟುವಂ ||೮||

ಆ ಸಮಯದೊಳ್,

ಇಂದುಗೆ ಮೇಘಂ ಕವಿದೊಡ |
ಮಂದೀ ಲೋಕಕ್ಕೆ ತಣ್ಪು ತಪ್ಪದ ತೆಱದಿಂ ||
ದಿಂದುಧರಂ ವರವಟುವೇ |
ಷಂದಳೆದೊಡನಗಜೆಗಾದುದತಿಹರ್ಷಮುಖಂ ||೯||

ಅಂತು ಹರ್ಷವನಿಮಿತ್ತಮೇಕಾದಪುದೆಂದು ನಿಮಿತ್ತಮನಱಿಯದೆ ಬೆಱಗಾಗಿ ನೋಡುತಿರ್ಪಲ್ಲಿ

ಗಿರಿಸುತೆಯ ಮಧುರದೃಷ್ಟಿಗ |
ಳುರವಣೆಯಿಂ ತಾಗೆ ತನ್ನನಾಗಳ್ ವಿಪ್ರಂ ||
ಕರಗಿ ನಿಲಲಾರದೆಳ್ದಾ |
ತುರಪುಳಕಮನಂತುಮಿಂತು ಸಂತವಿಡುತ್ತುಂ ||೧೦||

ನೆಗೆವ ಜಡೆಮುಡಿಯನೊತ್ತು |
ತ್ತೊಗೆವ ಭುಜಾಳಿಯನಡಂಗಿಸುತ್ತೂರುಗಳಿಂ ||
ಮಿಗುವ ವೃಷೇಂದ್ರನನೌಂಕು |
ತ್ತಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತುಂ ||೧೧||

ಎಂತಾನುಂ ನಿಜರೂಪಂ |
ಸಂತವಿಡುತ್ತಲ್ಲಿ ವಿಪ್ರನತಿಧೈರ್ಯತೆಯಿಂ ||

ಮುಂತಿಟ್ಟು ಗಿರಿಜೆಯೊಡನುಸಿ।
ರ್ದಂ ತಡಬಡಿಸುತ್ತೆ ಮಿಸುಪ ಪೊಸಪುಸಿವಾತಂ ॥೧೨॥

ಈ ಸುಕುಮಾರತೆಯೀ ನಿಲ।
ವೀ ಸುಕುರತೆಯೀ ನವೀನಯೌವನಮುದವೀ॥
ಭಾಸುರತೆಯೀ ಸುಧಾಮಯ।
ವೀ ಸುಖದೊಳ್ ತಪಮಿದೆಂತು ಬಂದುದು ಮುಗ್ಧೇ ॥೧೩॥

ನಿನಗೇಕೀ ತರುಣತೆಯೊಳ್।
ಘನತಪವೆಡೆಗೊಂಡುದಕಟ ನವಲತೆಯಂ ಸೂ॥
ರ್ಯನ ಬಿಸಿಲಿಂ ಕೊರಗಿಪ ದು।
ಷ್ಪನನೆನಗಱಿಪಬಲೆ ಸೌಕುಮಾರ್ಯಾವರಣೇ ॥೧೪॥

ಬಿಸಿಲೆನ್ನದೆ ಮಳೆಯೆನ್ನದೆ।
ಶಿಶಿರಮಿದೆನ್ನದೆ ತೃಷೋನ್ನತಿ ಕ್ಷುಧೆ ನಿದ್ರಾ॥
ವಿಸರಮುಮಂ ನೆಱೆ ಗೆಲ್ದೀ।
ವಸುಮತಿ ಬೆಱಗಾಗೆ ತಪದೊಳಿರ್ಪವರುಂಟೇ ॥೧೫॥

ವನಜಾನನೆ ಏಱುಂಜ-।
ವ್ವನದೊಳ್ ವನದೊಳ್ ನಿರೋಧದೊಳ್ ಪೇಳಿಂತಾ॥
ವನನುದ್ದೇಶಿಸಿ ತಪಮಿದ।
ನೆನಗಱಿಪಿದೊಡೇನೊ ದೋಷಮೇ ಮೃಗನಯನೇ ॥೧೬॥

ಎಂದು ಪ್ರೇಮಜನಪ್ರಣಯಕಲಹಲೀಲಾಲೋಲಚಿತ್ತನಪ್ಪ ವಿರೂಪಾಕ್ಷಂ ಪರಮವಟುವೇಷದಿಂ ನುಡಿದ ಮೃದುಕಠಿನಾಕ್ಷೇಪಗರ್ಭಿತವಚೋವಿಳಾಸಮಂ ಶೈಳಜೆ ಕೇಳ್ದು ಚಿಂತೆಯಂ ತಾಳ್ದು,

ಬೆಸಗೊಂಡಪನಮಳದ್ವಿಜ।
ನುಸಿರಲ್ ತಾಂ ಬಾರದುಸಿರದಿರಬಾರದೆನು॥

ತ್ರಸದೃಶತಪಮಂ ಮನದು |
ಬ್ಬಸದಿಂದೆ ಭವಾನಿ ಮಾನಿ ಮೆಲ್ಲನೆ ನುಡಿದಳ್ ||೧೭||

ಬಗೆವೆರ್ಚೆ ಕೇಳುತಿರ್ದಪೆ |
ಮಿಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ ಶಂ ||
ಭುಗೆ ಕಾರುಣ್ಯಾಬ್ಧಿಗೆ ಶೂ |
ಲಿಗೆ ಕರುಣಂ ಪುಟ್ಟುವಂತೆ ತಪದಿಂದಿರ್ಪೆಂ ||೧೮||

ಎನುತುಂ ಗದ್ಗದಿಸುತೆ ಪುಳ |
ಕನಿಕಾಯಮನಾನುತಶ್ರುವಂ ಕಳೆಯುತ್ತುಂ ||
ಘನಹರ್ಷಚಿತ್ತೆಯಾಗು |
ತ್ತೆ ನಗೇಶ್ವರಪುತ್ರಿ ಶಂಕರನ ಪೆಸರ್ಗೊಂಡಳ್ ||೧೯||

ಎಂದು ವಿರೂಪಾಕ್ಷಂಗೆ ತಪಮಿರ್ದಪೆನೆಂಬ ನುಡಿಯಂ ಕೇಳ್ದು ದುಷ್ಟ
ಧರಾಮರನಟ್ಟಹಾಸದಿಂದಿಂತೆಂದಂ,

ಅಕ್ಕಕ್ಕು ಕಾಮಹರನೊಳ್ |
ಮುಕ್ಕಣ್ಣನೊಳಖಿಳವೇದಶಾಸ್ತ್ರಕ್ರಮಮುಂ ||
ಮಿಕ್ಕವನೊಳ್ ಪಿತೃವನದೊಳ್ |
ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ ||೨೦||

ನೀನಿನಿಯಳ್ ವಿಷನಾತಂ |
ನೀನತಿಮೃದು ಕಠಿಣನಗುಣಗಣಾಶ್ರಯನಾತಂ ||
ನೀನಬಲೆಯುಗ್ರನಾತಂ |
ನೀನುರುತರಭೀರು ಸರ್ಪಭೂಷಣನಾತಂ ||೨೧||

ಪುಲಿದೊವಲುಡುಗೆಯ ಹಾವಿನ |
ನೆಲೆದೊಡಿಗೆಯ ನೊಸಲ ಕಣ್ಣ ಖಟ್ವಾಂಗದ ಸಂ ||
ದಲೆಗಳ ಮಾಲೆಯ ಶೂಲದ |
ಕಲಿಗಂಜದೆ ಮನವನೆಂತು ಮಾಡಿದೆ ಮುಗ್ಧೇ ||೨೨||

ಎಂದು ವಿಪ್ರಂ ನುಡಿದ ಶಿವನಿಂದೆಗೆ ಭವಾನಿ ಮುನಿದು ಕನಲ್ದು ಕಿನಿಸಿ ಕಿಡಿಕಿಡಿವೋಗಿ,

ತಪವಂತದಿರ್ಕೆ ಮಾಡುವ |
ಜಪವಿರ್ಕೆ ಮೃಗಾಂಕಮೌಳಿಯುಂ ಭರದಿಂ ಧ್ಯಾ ||
ನಿಪುದಿರ್ಕೆ ಶಂಭುವಂ ನಿಂ|
ದಿಪುದಂ ಕೇಳ್ದೊಂದು ಪಾಪಮಿಂದೆನಗಾಯ್ತೇ ||೨೩||

ಘೋರತಪದಲ್ಲಿ ಕೋಪಿಸ |
ಬಾರದು ತಾಂ ತಪದ ಕೇಡು ಪತಿನಿಂದೆಯುಮಂ ||
ಸೈರಿಸಬಾರದೆನುತ್ತೆ ವಿ |
ಚಾರಮನುಳಿದಗಜೆ ಮನದ ಮುಳಿಸಿಂದಾಗಳ್ ||೨೪||

ಆದ ನಿರೋಧದ ನಿಂದೆಯ |
ನಾದರಿಸದೆ ಭಸಿತದಿಂದೆ ವಿಪ್ರನನಿಡೆ ಪೋ ||
ಪೋದುದು ವಟುವೇಷಂ ಶಿವ|
ನಾದೊಡದೇಂ ಪುಸಿ ದಿಟಕ್ಕೆ ನಿಲ್ವುದೆ ಜಗದೊಳ್ ||೨೫||

ಆಗಳ್,

ಮುಗಿಲ ತೆಱೆ ಸರಿದ ಶಶಿಯಂ |
ತೊಗೆದ ತಮಂ ತೆಗೆದ ತರುಣತರಣಿಯ ತೆಱದಿಂ ||
ಪೊಗೆ ತಳ್ಗಿದಗ್ನಿಯಂತಿರೆ |
ಮಿಗೆ ವೇಷಂ ತೊಲಗಿ ಶಂಭು ತೊಳಗುತ್ತಿರ್ದಂ ||೨೬||

ಜಡೆಮುಡಿ ಪಂಚಮುಖಂ ನೆಗೆ |
ದುಡುಪತಿಕಳೆ ದಶಭುಜಂ ತ್ರಿಣೇತ್ರಂ ಗಾತ್ರಂ ||
ಬಿಡಿದ ನವಭೂತಿ ಪುಲಿದೊವ|
ಲುಡಿಗೆಗಳಿಂ ಶಂಕರಂ ಕರಂ ಮೆಱೆದಿರ್ದಂ ||೨೭||

ಆ ಸಮಯದೊಳ್,

ಸರಿದುದು ಪುಸಿವೇಷದ ತೆಱೆ |
ಸುರಿದುದು ಕೆಯ್ನಾರ ತೆಱದೆ ಪೂವಳೆ ಸರಿಸಂ ||
ಬರಿದುದು ಜೀರಿಗೆಬೆಲ್ಲದ |
ಪರಿಯಿಂ ಮುಳಿದಿಟ್ಟ ಭಸಿತಮುದೆ ಮದುವೆಯವೋಲ್ ||೨೮||

(ಹರಿಹರ ದೇವ - ಗಿರಿಜಾಕಲ್ಯಾಣ)

---

## ೧೬. ಮಂಗಳವಾಡಿಗೆ ಬಸವಣ್ಣನ ಆಗಮನ

ಎಂದಲ್ಲಿ ಕರುಣಿಸಿದ ಮಾತು ಸಂಬಳವಾಗಿ |
ಬಂದನೆಂತೆಂತಕ್ಕೆ ಅಗಲಲಾಱದೆ ರಾಗಿ ||
ಸಂಗಮನ ಕರುಣವೇ ತನಗೆ ಬೆಂಬಲವಾಗಿ |
ಸಂಗಮಧ್ಯಾನವೇ ತನಗೆ ಸಂಗಡವಾಗಿ ||
ಸಂಗನಾಡಿದ ಮಾತನಾಡಿ ಹಾರೈಸುತಂ |
ಸಂಗನಿರ್ದಿರವ ತಾ ನೆನೆದು ನೆಱೆ ಹಿಗ್ಗುತಂ ||
ನಡೆವಾಯಸವನಱಿಯದಾನಂದದಿಂ ಮಿಕ್ಕು |
ಮೃಡನೆ ಶರಣೆನುತೆ ಮಂಗಳವಾಡಮಂ ಪೊಕ್ಕು ||
ಪಟ್ಟಣದ ಕೇರಿಕೇರಿಗಳೊಳಗೆ ನಡೆವುತಂ |
ಇಟ್ಟಣಿಪ ಸಂಪದಕೆ ಸಂತಸಂಬಡೆವುತಂ
ಬಂದು ಬಿಜ್ಜಳರಾಯನರಮನೆಗೆ ನಡೆವುತಂ |
ಸಂದಣಿಪ ರಾಜಪುತ್ರಾಳಿಯಂ ನೋಡುತಂ ||
ಮತ್ತಗಜಘಟೆತುರಂಗಾಳಿಯಂ ನೋಡುತಂ |
ಹತ್ತರಿಪ ವೀರಭಟರೊಪ್ಪವಂ ಕಾಣುತಂ ||

ಭಾವರಸಪೂರಿತಕವೀಂದ್ರರಂ ನೋಡುತಂ |
ನೇವುರದ ನುಣ್ದನಿಯ ಸತಿಯರಂ ನೋಡುತಂ ||
ಕುಪ್ಪಸದ ಬೀರಣೆಯ ಬಿನ್ನಣದ ಹಸನಿಗಂ |
ಟೊಪ್ಪಿಗೆಯ ಹೊಱವೇಷದಿಹಪರದ ಲೆಕ್ಕಿಗಂ ||
ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದರ್ |
ಸಡಗರಿಸಿ ಬರೆವ ಗಣಕರನೀಕ್ಷಿಸುತ್ತಿರ್ದರ್ ||
ಕರಣಸಂಪ್ರತಿಯ ಸಂಪದದ ಗಣಕರ್ಕಳಂ |
ಎರೆವ ಲಂಚವನೀವ ದಂಡನಾಥರ್ಕಳಂ ||
ಲೆಕ್ಕಕ್ಕೆ ಬಂದಿರ್ಪ ರಾಜಪುತ್ರರ್ಕಳಂ |
ಮಿಕ್ಕು ಝುಂಕಿಪ ಸಲುಗೆಯಾಳ್ಗಳೊಪ್ಪಂಗಳಂ ||
ನೋಡುತಂ ಬೆಱಗಾಗುತಲ್ಲಿ ಬಸವಣ್ಣನಿರೆ |
ಕೂಡೆ ಲೆಕ್ಕದ ಸಂಭ್ರಮಂ ಸಿರಿಯನುಗಳುತಿರೆ ||

ಬಂದನಲ್ಲಿಗೆ ಮೆಱೆವ ಭಂಡಾರಿ ರಾಗದಿಂ |
ಸಂದಣಿಸಿ ಲೆಕ್ಕಮಂ ನೋಡುವುದ್ಯೋಗದಿಂ ||
ಕಮ್ಮೆ ಕುಲಪತಿಯೆನಿಪ ಸಿದ್ಧದಂಡಾಧಿಪಂ |
ಸುಮ್ಮಾನಿ ಶಿವಭಕ್ತನಚಳಿತಗುಣಾಧಿಪಂ ||
ಕುಳ್ಳಿರ್ದರ್ ತನ್ನ ಲೆಕ್ಕಂಗಳಂ ಕೇಳುತಿರೆ |
ಒಳ್ಳಿತೆನೆ ಗಣಕರ್ಕಳೆಲ್ಲರುಂ ನೋಡುತಿರೆ ||
ಆಯದೊಳು ಬೀಯಮಂ ಕಳೆದು ನಿಲವಂ ಕಂಡು |
ಆಯತಿಯೊಳೆಲ್ಲರುಂ ಪೇಳಲ್ ಮನಂಗೊಂಡು ||
ಐದು ಕೋಟಿಯ ಮೇಲೆ ಲಕ್ಕವೈವತ್ತೊಂದು |
ಐದೆ ಗಣಕರ್ ತಪ್ಪಿ ಪೇಳೆ ಭರದಿಂದಂದು ||
ತಪ್ಪಿದುದನಱಿದನಾ ಬಸವರಾಜಂ ನೋಡ |
ಒಪ್ಪುವ ಗಣೇಶ್ವರರ ಗಣಕಾಧಿಪಂ ನೋಡ ||
ಭಂಡಾರಿಗಂ ಸ್ಥಿತವನೊಲಿದೊಡಂಬಡಿಸುತಿರೆ |
ತಂಡತಂಡದ ಗಣಕತತಿ ತಪ್ಪದೆನುತಮಿರೆ ||

ಕಂಡು ಬಸವಂ ಭಕ್ತನೊಡನೆ ಕೆಡಲಾಗದಿದು |
ಕಂಡುದಂ ಪೇಳ್ವೆನಯ್ಯಾ ಎನುತ್ತಂ ನೆನೆದು ||
ಸಿದ್ಧದಂಡಾಧಿಪನನಲ್ಲಿ ಬಸವಂ ನೋಡಿ |
ಬುದ್ಧಿ ನಿಮಗಿಲ್ಲ ತಪ್ಪಿದುದು ಲೆಕ್ಕಂ ನೋಡಿ ||
ಎಂದು ಮತ್ತೊಮ್ಮೆ ನೋಡಿಸುತಲಿಪ್ಪನಿತಕ್ಕೆ |
ಸಂದಾಯಮಂ ಬೀಯದೊಳಗೆ ಕಳೆವನಿತಕ್ಕೆ ||
ಐದುಕೋಟಿ ಸ್ಥಿತವನೊಳಗೆ ಗಣಕರ್ ಕಂಡು |
ಐದೆ ಬಸವಣ್ಣನುಮನೀಕ್ಷಿಸುತೆ ಮನಗೊಂಡು ||
ಭಂಡಾರಿಯುಂ ಗಣಕರುಂ ಮತ್ತೆ ಮಿಗೆ ನೋಡಿ |
ಕೊಂಡಾಡಿ ಬೆಱಗಾಗಿ ಕೌತುಕದೊಳೋಲಾಡಿ ||
ಹರೆಯವಿದು ಲೆಕ್ಕವಿದು ಹರನ ಕಾರುಣ್ಯವಿದು |
ಶರಣಕಾರಣಿಕನೀತಂ ನಮ್ಮ ಭಾಗ್ಯವಿದು ||
ಎಮಗೆ ತಮಗೆಂದು ಬಸವನನೆಲ್ಲರುಂ ಬೇಡಿ |
ನಿಮಗಲ್ಲದೆನುತೆ ಭಂಡಾರಿಗಂ ತಾಂ ಕೂಡಿ ||
ಕೊಂಡೊಯ್ದು ಬಿಜ್ಜಳನನಲ್ಲಿ ಕಾಣಿಸಿ ದೇವ |
ಕಂಡೆನಿಲ್ಲಿಂತಪ್ಪ ಮತಿಯನಿಂತೆಲೆ ದೇವ ||
ಲಕ್ಕವೈವತ್ತನಿಂತೆನಗಾಗುಮಾಡಿದಂ |
ಲೆಕ್ಕದೊಳು ಪಡಿಯಿಲ್ಲ ಮತಿಯುಳ್ಳ ಕೋವಿದಂ ||
ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ |
ಉನ್ನತಜ್ಞಾನಯುತಗಣಕವಿಖ್ಯಾತನಂ ||
ಎಂದು ಉಡಕೊಡಿಸಿ ಜೀವಿತವನಾಗಳೆ ಮಾಡಿ |
ಒಂದು ವರುಷಕ್ಕೆ ನೂಱೊಂದು ಹೊನ್ನಂ ಬೇಡಿ ||
ಕೊಡಿಸಿ ಭಂಡಾರಿ ತನ್ನರಮನೆಗೆ ಕೊಂಡೊಯ್ದು |
ಕಡುಮೋಹದಿಂದ ಹೊಗಳುತ್ತೆ ಮನ್ನಣೆಗೆಯ್ದು ||
[ ಸುಖದಿನಿರ್ದಂ ]

[ಹರಿಹರದೇವ - ಬಸವರಾಜದೇವರ ರಗಳೆ]

# ೧೭. ಹರಿಶ್ಚಂದ್ರ ಚಂಡಾಲಕನ್ನಿಕೆಯರ ಸಂವಾದ

ಹಂದಿಯಂ ಕಾಣುಹ ತಡಂ ಕೋಪಸಗಿಚ್ಚು ಭುಗಿ |
ಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ |
ಸಂದ ಯೋಗಂ ಹಿಂಗಿ ದಯೆ ದಾಂಟಿ ನೀತಿ ಬೀ
ತಾನಂದವಱಿತು ಹೋಗಿ ||

ಹಿಂದ ನೆನೆದುರಿದೆದ್ದು ಸಿಕ್ಕಿದನಲಾ ಭೂಪ |
ನಿಂದು ನಾನಾಯ್ತು ತಾನಾಯ್ತು ಕೆಡಿಸದೆ ಮಾಣೆ |
ನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂ
ದೊಗೆದರಿಬ್ಬರು ಸತಿಯರು ||೧||

ಮುನಿಗೆ ಹೊಲೆಯಾವುದತಿಕೋಪ ಬದ್ಧದ್ವೇಷ |
ವನಿಮಿತ್ತ ವೈರವದಱಿಂದ ಹುಟ್ಟಿದರಾಗಿ |
ವನಿತೆಯರು ಕಡೆಗೆ ಹೊಲತಿಯರಾಗಿ ಕೆಲಸಾರಿ
ನಿಂದು ಬೆಸನಾವುದೆನಲು ||

ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋ |
ವನದೊಳ್ಳಿದನೆ ನೀವು ಸರ್ವಬುದ್ಧಿಗಳೊಳಾ |
ತನ ಮರುಳುಮಾಡುತಿರಿ ಹೋಗಿಯೆಂದಟ್ಟಿದಂ
ದುರ್ಮಂತ್ರಬಲವಂತನು ||೨||

ಸಂದ ಕಾರಿರುಳ ಕನ್ನೆಯರು ಪಗಲಂ ನೋಡ |
ಲೆಂದು ಬಂದರೊ ಸುರಾಸುರರಬುಧಿಯುಂ ಮಥಿಸು |
ವಂದು ಹೊಸ ವಿಷದ ಹೊಗೆ ಹೊಯ್ದು ಕಗ್ಗನೆ ಕಂದಿ
ಜಲದೇವಿಯರು ಮನದಲಿ ||

ನೊಂದು ಮಾನಿಸರಾದರೋ ಕಮಲಜಂ ಸೀಲ |
ದಿಂದ ಮಾಡಿದ ಸಾಲಭಂಜಿಕೆಗಳೊದವಿ ಜೀ |
ವಂದಳೆದವೋ ಎನಿಸಿ ಸ್ಪಂದದಿಂ ಬಂದರಂ
ಗನೆಯರವನೀಶನೆಡೆಗೆ ||೩||

ಮಾಯುಪಬಲೆಯರು ಕಾಣುತ್ತ ಮಝಭಾಪದಟ |
ರಾಯ ಮಝರೇ ರಾಯ ರಾಯದಳವುಳಕಾಱ |
ರಾಯಕಂಟಕ ರಾಯಜಗಜಟ್ಟಿ ರಾಯದ
ಲ್ಲಣ ರಾಯಕೋಳಾಹಳ ||

ರಾಯಭುಜಬಲಭೀಮ ರಾಯಮರ್ದನರಾಯ |
ಜೀಯ ಸ್ಥಿರಂಜೀವಯೆಂದು ಕೀರ್ತಿಸಿ ಗಾಣ |
ನಾಯಕಿಯರೊಲಿದು ದಂಡಿಗೆವಿಡಿದು ಪೊಡಮಟ್ಟು
ಹಾಡಲುದ್ಯೋಗಿಸಿದರು ||೪||

ಎಕ್ಕಲನ ಬಳಿವಿಡಿದು ಸುತ್ತಿದಾಪಱನು ಮುನಿ |
ರಕ್ಕಸನ ಬನಕೆ ಬಂದಂಜಿಕೆಯನೆರಡನೆಯ |
ಮುಕ್ಕಣ್ಣನೆನಿಪ ಗುರುವಾಜ್ಞೆಗೆಟ್ಟಳಲನ
ಲ್ಲದೆ ಕನಸ ಕಂಡ ಭಯವ ||

ಮಿಕ್ಕು ಮಱೆವಂತಡಸಿ ಕವಿವ ಗತಿಗಳ ಸೊಗಸಿ |
ನಕ್ಕಿಸದೆ ಸಮಯೋಚಿತದ ಪಸಾಯಕ್ಕೆ ಮನ |
ವುಕ್ಕಿ ಸರ್ವಾಭರಣಮುಂ ಗಾಣರಾಣಿಯರಿ
ಗಿತ್ತನು ಹರಿಶ್ಚಂದ್ರನು ||೫||

ಬಡತನದ ಹೊತ್ತಾನೆ ದೊರಕಿ ಫಲವೇನು ನೀ |
ರಡಸಿರ್ದ ಹೊತ್ತಾಜ್ಯ ದೊರಕಿ ಫಲವೇನು ರುಜೆ |
ಯಡಸಿ ಕೆಡೆದಿಹ ಹೊತ್ತು ರಂಭೆ ದೊರೆಕೊಂಡಲ್ಲಿ
ಫಲವೇನು ಸಾವ ಹೊತ್ತು ||

ಪೊಡವಿಯೊಡೆತನ ದೊರಕಿ ಫಲವೇನು ಕಡುವಿಸಿಲು |
ಹೊಡೆದು ಬೆಂಡಾಗಿ ಬೀಳ್ವನುಗೆ ನೀನೊಲಿದು ಮಣಿ |
ದೊಡಿಗೆಗಳನಿತ್ತು ಫಲವೇನು ಭೂಪಾಲ ಹೇ
ಳೆನುತ ಮತ್ತಿಂತೆಂದರು ||೬||

ಕಡಲೊಳಾಳ್ವಂಗೆ ತೆಪ್ಪವನು ದಾರಿದ್ರ್ಯಂಗೆ |
ಕಡವರವನತಿರೋಗಿಗಮೃತಮಂ ಕೊಟ್ಟಡವ |
ರಡಿಗಡಿಗದಾವ ಹರುಷವನೆಯ್ದುತಿಪ್ಪರವ
ರಂ ಪೋಲ್ವರೀ ಪೊತ್ತಿನ |

ಸುಡುಸುಡನೆ ಸುಡುವ ಬಿಱುಬಿಸಿಲ ಸಕೆಯುಸುರ ಬಿಸಿ |
ಹೊಡೆದುದುರಿಹತ್ತಿ ಬಾಯಾರ್ ಒತ್ತಿ ಡಗೆ ಸುತ್ತಿ ಸಾ |
ವಡಸುತಿಪ ನಿನ್ನ ಮುತ್ತಿನ ಸತ್ತಿಗೆಯನಿತ್ತು
ಸಲಿಹು ಭೂಭುಜಯೆಂದರು ||೭||

ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪ |
ಟ್ಟವ ಕಟ್ಟುವಂದಿದಿಲ್ಲದಡರಸುತನ ಸಲ್ಲ|
ದವನಿಯೊಳು ಯುದ್ಧರಂಗದೊಳಿದಂ ಕಂಡ ಹಗೆ
ಗಳು ನಿಲ್ಲರಿದಱ ಕೆಳಗೆ ||

ಕವಿವ ನೆಳಲೊಳಗಾವನಿರ್ದನಾತಂಗೆ ತಾಂ |
ತವಿಲೆಡರು ಬಡತನಂ ರೋಗವಪಕೀರ್ತಿ ಪರಿ |
ಭವಭಯಂ ಹರೆವುದಿದನಱಿದಱಿದು ಸತ್ತಿಗೆಯ
ಕೊಡಬಹುದೆ ಹೇಳೆಂದನು ||೮||

ಅನುನಯದೊಳೆಲ್ಲವಂ ಕೊಡಬಹುದು ಬಿಡಬಹುದು |
ಜನನಿಯಂ ಜನಕನಂ ನಲ್ಲಳಂ ದೈವವಂ |
ಮನವಾರೆ ನಂಬಿ ನಚ್ಚಿರ್ದ ಪಾರಿವಾರಮಂ
ಕೊಡುವ ಬಿಡುವತಿಕಲಿಗಳು ||

ಜನರೊಳಗೆ ಜನಿಸರೆಂದೆನಲು ನೀನೀಗ ವೇ |
ಳ್ದನಿತಱೊಳು ಬೇಡಿದಡೆ ಕೊಡಬೇಡ ಕೊಡೆಯನೀ |
ಯೆನೆ ಲೋಭವೇಕರಸ ಎನಲಿದಲ್ಲದೆ ಬೇಱೆ
ಮಾತೆಪಿತರಿಲ್ಲೆಂದನು ||೯||

ಲೋಗರಿಗೆ ಕೊಡಬಾರದಾಗಿ ಸತಿ ವಂಶಗತ |
ವಾಗಿ ಬಂದುದಱಿಂದ ತಂದೆ ಪಟ್ಟವ ಕಟ್ಟಿ |
ವಾಗಲರ್ಚಿಸಿಕೊಂಬುದಾಗಿ ದೈವಂ ನೆಳಲ
ತಂಪನೊಸೆದೀವುದಾಗಿ ||

ಸಾಗಿಸುವ ತಾಯ್ ಧುರದೊಳರಿಗಳಂ ನಡುಗಿಸುವು |
ದಾಗಿ ಚತುರಂಗಬಲವೆನಿಸಿತೀ ಛತ್ರವೆಂ|
ಬಾಗಳಿದನಱಿದಱಿದು ಬೇಡುವರನತಿಮರುಳ
ರೆನ್ನರೇ ಮೂಜಗದೊಳು ||೧೦||

ಇಳೆಯೊಳಗೆ ಹೆಸರುಳ್ಳ ದಾನಿಯೆಂಬುದನು ಕೇ|
ಳ್ದಿಳಸಿ ಕಟ್ಟಾಸೆವಟ್ಟೆಯ್ತಂದು ಬೇಡಿ ನಿ |
ಷ್ಫಳವಾಗದಂತೆ ನಾವತಿಮಱುಗದಂತಳಲ
ದಂತೆ ಬಿಸುಸುಯ್ಯದಂತೆ ||

ತಿಳಿದು ನೀನೆಮಗೆ ವಲ್ಲಭನಾಗಿ ಚಿತ್ತದು |
ಮ್ಮಳಿಕೆಯಂ ಕಳೆ ಹರಿಶ್ಚಂದ್ರಭೂನಾಥ ಎಂ |
ದಳವಳಿದು ಬಾಯ್ವಿಟ್ಟು ಕೈಮುಗಿದು ನುಡಿದರೊಳ
ವಿಂದನಾಮಿಕಸತಿಯರು ||೧೧||

ಲಲಿತ ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯ |
ಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜ |
ಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ
ಭೂಪರಿಲ್ಲಿಂದು ತನಕ ||

ಹೊಲತಿಯರು ಬಂದಾವು ಸತಿಯರಾದಪ್ಪೆವೆಂ |
ಬುಲಿಹವೆಂಬುದು ಬಂದ ಕಾಲಗುಣವೋ ನಿಂದ |
ನೆಲದ ಗುಣವೋ ನೋಡು ನೋಡೆಂದು ಕಡುಮುಳಿದು
ಕೋಪಿಸಿದನವನೀಶನು ||೧೨||

ಪಾವನಕ್ಷೀರಮಂ ಕೊಡುವ ಕೆಚ್ಚಲ ಮಾಂಸ |
ವಾವ ಲೇಸಿನಿದುಳ್ಳ ಮಧುವನೊಸೆದೀವ ನೊಳ |
ವಾವ ಲೇಸಧಿಕಕಸ್ತೂರಿಯಂ ಕೊಡುವ ಮೃಗ
ನಾಭಿ ತಾನಾವ ಲೇಸು ||

ದೇವರಿಗೆ ಸಲ್ಲವೇ ಉತ್ತಮಗುಣಂಗಳಿ |
ರ್ದಾವ ಕುಂದಂ ಕಳೆಯಲಾಱವವನೀಶ ಕೇಳ್ |
ಭಾವಿಸುವಡಿಂದೆಮ್ಮ ರೂಪುಜವ್ವನವಿರಲು
ಕುಲದ ಮಾತೇಕೆಂದರು ||೧೩||

ಅಕ್ಕರಕ್ಕು ಬಚ್ಚಲುದಕಂ ತಿಳಿದಡಾರ ಮಿಾ |
ಹಕ್ಕೆ ಯೋಗ್ಯಂ ನಾಯ್ಗೆ ಹಾಲುಳ್ಳಡಾವನೂ
ಟಕ್ಕೆ ಯೋಗ್ಯಂ ಪ್ರೇತವನದೊಳಗೆ ಬೆಳೆದ ಹೂ
ವಾರ ಮುಡಿಹಕ್ಕೆ ಯೋಗ್ಯಂ ||

ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ|
ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇ |
ತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವೀ
ಮಾತು ತಾ ಹೊಲೆಯೆಂದನು ||೧೪||

ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ ಪೂ |
ತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ ರೂಪ ನೆಱೆ |
ನೋಡಿದ ವಿಲೋಚನಕೆ ಹೊಲೆಯಿಲ್ಲ ಮೆಯ್‌ಮುಡಿಗ
ಳಿಂ ಸುಳಿವ ತಂಗಾಳಿಯಿಂ ||

ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ |
ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತೆ |
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮ
ವೊಂದಧಿಕವೇ ಎಂದರು ||೧೫||

ಕಂಡಱಿವವೈಸಲೇ ನಯನೇಂದ್ರಿಯಂ ಘ್ರಾಣ |
ಕೊಂಡಱಿವವೈಸಲೇ ವಾಸನೆಯ ಕರ್ಣಂಗ |
ಳುಂಡಱಿವವೈಸಲೇ ಶಬ್ದಮಂ ದೂರದಿಂ
ದಲ್ಲದವು ಮುಟ್ಟಲಿಲ್ಲ ||

ಭಂಡತನವೀ ಮಾತಿದಕ್ಕೆಯುಪಮಾನವೇ |
ಕೆಂಡವನು ಮುಟ್ಟಿದಡೆ ಬೇವಂತೆ ಕೇಳ್ದಡಂ |
ಕಂಡು ವಾಸಿಸಿದಡಂ ಬೆಂದವೇ ಕಾಳುಗೆಡೆ
ಯದೆ ಹೋಗಿ ನೀವೆಂದನು ||೧೬||

(ರಾಘವಾಂಕ - ಹರಿಶ್ಚಂದ್ರ ಕಾವ್ಯ)

## ೧೮. ಹರಿಶ್ಚಂದ್ರನ ರಾಜ್ಯಪರಿತ್ಯಾಗ

ಇದು ರತ್ನ ಭಂಡಾರವಿದು ಹೇಮಭಂಡಾರ |
ವಿದು ಸುನಾಣೆಯವರ್ಗವಿದು ಪಟ್ಟಕರ್ಮಕುಲ |
ವಿದ ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣ
ವಿದು ಸರ್ವಶಸ್ತ್ರಶಾಲೆ ||

ಇದು ಹಸ್ತಿಸಂದೋಹವಿದು ತುರಗಸಂತಾನ |
ವಿದು ವರೂಥಪ್ರಕರವಿದು ಪದಾತಿವ್ರಾತ |
ವಿದ ನೋಡಿಕೋಯೆನುತ್ತೊಪ್ಪಿಸಿದನಾ ಮುನಿಗೆ
ಭೂನಾಥಕಂದರ್ಪನು ||೧||

ಹಿರಿಯ ಬಿರುದಿನ ಮುದ್ರೆಯಿದು ನಗರವಿದು ಪೂರ್ವ |
ದರಮನೆಯಿದಖಿಳಪರಿವಾರವಿದು ಸಿವುಡಿಯಿದು |
ಕರಣವಿದು ಮೇಲುಳ್ಳ ಸರ್ವಸ್ವವಿದು ನೋಡಿ
ಕೋ ಮಹಾಪುರುಷ ಎಂದು ||

ವರಕೌಶಿಕಂಗೊಪ್ಪುಗೊಟ್ಟೆಲ್ಲ ಸಂದುದೇ |
ಪರಿಣಾಮವೇ ಇನ್ನು ಹೋಹೆನೇ ಮುನಿನಾಥ |
ಕರುಣಿಸಿದಿರೇ ಎಂದು ಪೊಡವಂಟು ಹೋಹರಸ
ನೊಡನೆದ್ದನಾ ಮುನಿಪನು ||೨||

ಪೊಱಮಡುವ ಭೂಪಾಲನಂ ಕಂಡು ಕಣ್ಗೆಟ್ಟು |
ಮಱುಗ ಬಸುಱಂ ಹೊಸದು ಬಸವಳಿದು ಬಿಸುಸುಯ್ದು |
ಮೊಱೆಯಿಟ್ಟು ಬಾಯ್ಬಿಟ್ಟು ಕೈಸೀಡಿ ಕರೆದು ಕ |
ಟ್ಟೊಱಲಿ ಸೈರಿಸಲಾಱದೆ |

ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರಮಂ |
ಮಱೆದೆಯೋ ತೊಱೆದೆಯೋ ಮಾಱಿದೆಯೊ ಪೇಳು ನೀ |
ಸಱ ಕುಲಜ ಎಂದೆಂದು ನುಡಿನುಡಿದು ಮಿಡುಮಿಡನ
ಮಿಡುಕಿತ್ತು ಪೌರಜನವು ||೩||

ದಂತಿಯಿಂದಿಳಿದು ನಡೆದಱಿಯದವ ಬಱಿಗಾಲೊ |
ಳಿಂತಡಿಯನಿಡುವೆ ಹಾಸಿನೊಳು ಪವಡಿಸುವಾತ |
ನೆಂತು ಕಲುನೆಲದೊಳೊಱಗುವೆ ಸಿತಚ್ಛತ್ರ ತಂ
ಪಿನೊಳು ಬಪ್ಪಾತ ನೀನು ||

ಎಂತು ಬಱಿಬಿಸಿಲನಾನುವೆ ಪುರದೊಳಿಪ್ಪಾತ |
ನೆಂತರಣ್ಯದೊಳಿಪ್ಪೆ ಜನವನಗಲ್ದಱಿಯದವ |
ನೆಂತು ಪೇಳೇಕಾಕಿಯಾಗಿಪ್ಪೆ ಎಂದು ಬಾ
ಯ್ವಿಟ್ಟುದು ಸಮಸ್ತಜನವು ||೪||

ಹೊಱಗೆ ದಾನವ ಬೇಡುವವರುಂಟೆ ಕೊಟ್ಟು ಬೇ |
ಸಱಿದ ಮುಗುದರಸು ದೊರಕಿದನಲಾ ಎಂದು ಕ
ಟ್ಟಿಱಿಗಂಡ ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ
ನೀಚ ನೀರಸ ನಿರ್ಗುಣಿ ||

ನೆಱೆ ಕೊಂದೆ ನಂಬಿ ನಚ್ಚಿರ್ದರೆಮ್ಮೊಡಲೊಳ |
ಳ್ಳಿಱಿಯುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ |
ನಿಱಿಯದೇ ಹೇಳು ವಿಶ್ವಾಮೃತ್ಯುವಾದೆ ವಿ
ಶ್ವಾಮಿತ್ರ ಎನುತಿರ್ದರು ||೫||

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ |
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ |
ಶರಧಿಪರಿವೃತಧರೆಯ ಸಿರಿಯ ಸೊಬಗಜ್ಞಾತ
ವಾಸಕ್ಕೆ ಪೋಗುತಿದೆ ಕೋ ||

ಎರೆವ ದೀನಾನಾಥರಾನಂದವಡಗುತಿದೆ |
ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ |
ನಿರುತವೆಂದೊಂದಾಗಿ ಬಂದು ಸಂದಿಸಿ ನಿಂದ
ಮಂದಿ ನೆಱೆ ಮೊಱೆಯಿಟ್ಟುದು ||೬||

ವಸುಧೆ ಬಾಯ್ಬಿಡೆ ದೆಸೆಗಳಸವಳಿದು ಮಱುಗೆ ನಿ |
ಟ್ಟಿಸಲಾಱದಂಬರಂ ಕಂಬನಿಯನುಗುಳೆ ಶೋ |
ಕಿಸುವ ಪರಿಜನದಳಲನಾಱುಸುತ ಪಾಲಿಸುತ
ಸರದೋಱಿ ಸಂತವಿಡುತ ||

ಮಸಗಿ ಪುರಮಂ ಮೀಱಿ ಹೋಗುತ್ತ ಹಿಂದೆ ಸಂ |
ದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ |
ನೊಸೆದು ನಿಲಿಸುವ ಭರದೊಳೊಂದೆರಡು ಮಾತನಾ
ಡಿದನದೇವಣ್ಣಿಸುವೆನು ||೭||

ಹಿಂದೆ ರಾಜ್ಯಂಗೆಯ್ವ ಗರ್ವದಿಂ ಹೊಲತಿಯರ |
ತಂದು ಕುಲವಂ ಕೆಡಿಸಲಾಱದಳಲಿಂ ನಿಮ್ಮ |
ನೊಂದೊಂದು ವಿಧದಿ ದಟ್ಟಿಸಿ ಜಱೆದು ಮಾಯುತ್ತ
ರಂಗೊಟ್ಟು ಕೆಟ್ಟು ನುಡಿದು ||

ನಿಂದೆಗೆಯ್ದ ನ್ಯಾಯ ಪಾಪಿ ಚಂಡಾಲನೆ |
ನ್ನಿಂದಧಮರಾರಯ್ಯ ಸರ್ವಾಪರಾಧಿಯಾಂ |
ತಂದೆ ಕರುಣಂಗೆಡದಿರೆಂದು ಮುನಿಯಂ ಬೇಡಿ
ಕೊಂಡನು ಹರಿಶ್ಚಂದ್ರನು ||೮||

ಮನದೊಳಗೆ ಮಱುಗದಿರಿ ಚಿಂತಿಸದಿರಳಲದಿರಿ |
ಮುನಿಯದಿರಿ ನೋಯದಿರಿ ಧೃತಿಗೆಡದಿರೀಗಳೆಂ |
ದನೆಯ ಶಿವನೆನಿಪ ಕೌಶಿಕನೊಡೆಯನಾದನಾ
ತನ ಪಾದಪಂಕಜಕ್ಕೆ ||

ಎನಗೆ ಬೆಸಕೈವಂತೆ ಬೆಸಕೈವುದಂಜುವುದು |
ವಿನಯಮಂ ನುಡಿವುದೋಲೈಸುತಿಹುದೆಂದು ಪರಿ |
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯ
ನಿಧಿ ಹರಿಶ್ಚಂದ್ರನೃಪನು ||೯||

ಧರೆಗಧಿಕವೆನಿಪ ರವಿವಂಶದಿಕ್ಷ್ವಾಕು ಭೂ |
ವರನು ಮೊದಲನ್ವಯಾಗತವಾಗಿ ಬಂದುದೀ |
ಪರಿವಾರವೀ ದೇಶವೀ ನಗರವಿಂದುತನ
ಕಾವೆಡರುಬಡತನವನು ||

ನೆರೆದಱಿಯದಯ್ಯ ನೀವಿನ್ನಿದಂ ರಕ್ಷಿಪುದು |
ಹೊರೆವುದಿನಿತಂ ಬೇಡಿ ಪಡೆದೆ ನಾ ನಿಮ್ಮಲ್ಲಿ |
ಕರುಣಿಸೆನಗೆಂದು ಕೈಮುಗಿದು ಮುನಿಗಪ್ಪಯಿಸಿ
ಕೊಟ್ಟನು ಹರಿಶ್ಚಂದ್ರನು ||೧೦||

(ರಾಘವಾಂಕ - ಹರಿಶ್ಚಂದ್ರ ಕಾವ್ಯ)

## ೧೯. ಚಂದ್ರಮತಿಯ ಪ್ರಳಾಪ

ಏವೆನೇವೆನೆಲೆ ಮಗನೇ ಮಗನೇ |
ಸಾವೇಕಾಯಿತ್ತೆಲೆ ಚಿನ್ನಿಗನೇ ||
ಇಱಿದೆಯಲಾ ಎನ್ನನು ಸುಕುಮಾರಾ |
ಕೊಱೆದೆಯಲಾ ಕೊರಳನು ಜಿತಮಾರಾ ||
ಎತ್ತಣ ಬಱಿಸಿಡಿಲೆಱಗಿತೊ ನಿನ್ನ |
ಹುತ್ತಿನ ಹತ್ತಿರೆ ಒಱಗಿದೆ ಚಿನ್ನ ||

ಹಾವು ಹಿಡಿಯೆ ಹಾ ಎಂದೋಱಲಿದೆಯಾ |
ಸಾವಾಗವ್ವಾ ಎಂದಳಲಿದೆಯಾ ||
ರನ್ನದ ಕನ್ನಡಿ ಪಿಡಿದುಡೊ ದೇವಾ |
ಹೊನ್ನಕಳಸ ಕೆಡೆದೊಡೆದುದೊ ದೇವಾ
ಎನ್ನ ಕಡವರಂ ಸೂಱೆಹೋಯಿತೋ |
ಹೊನ್ನ ಪ್ರತಿಮೆಯಸು ಹಾಱುಹೋಯಿತೋ ||
ಇನವಂಶದ ಲತೆ ಕುಡಿಮುರುಟಿತ್ತೋ |
ಜನಪನಿಟ್ಟ ಸುರತರು ಮುಱುಯಿತ್ತೋ ||
ಕಾಲ ಕರುಣವಿಲ್ಲದೆ ನೀನೊಯ್ದೆ |
ಬಾಲನನಗಲಿಸಿ ಕೊರಳಂ ಕೊಯ್ದೆ ||
ಆರ ಸಿರಿಯನೆಳೆತಂದೆನೊ ಮುನ್ನ |
ಆರಳಲಲು ಸೆಳೆಕೊಂಡೆನೊ ಹೊನ್ನ ||
ಅಲ್ಲದಡೀಯಳಲಪ್ಪುದೆ ನನಗೆ |
ಇಲ್ಲಿ ವೃಥಾ ಸಾವಪ್ಪುದೆ ನಿನಗೆ
ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೆ |
ಎತ್ತಿದ ತೋಳನು ಕೆತ್ತಿದೆ ಮಗನೆ ||
ಹಾಡುವ ಬಾಯಲಿ ಮಣ್ಣನು ಹೊಯ್ದೆ |
ನೋಡುವ ಕಣ್ಣಲಿ ಸುಣ್ಣವ ಹೊಯ್ದೆ ||
ಪಾಪಿಯೆನ್ನ ನೀನೊಮ್ಮೆಗೆ ನೋಡಾ |
ಕೋಪವನುಳಿದೊಯ್ಯನೆ ಮಾತಾಡಾ ||
ನುಡಿದಡೆ ಪಾಪವೆ ಹೆತ್ತವರೊಡನೆ |
ಕಡುಮುಳಿಸೇ ಮಗನೇ ಎನ್ನೊಡನೆ ||
ಬಾರೈ ಬಹಳ ಸಿರಿಯ ಸಿಂಗಾರ |
ಬಾರೈ ಸುಜನಜನಕ್ಕಾಧಾರ
ಏಳೆನ್ನಾನಂದಾಮೃತಶರಧಿ |
ಏಳಖಿಳಗುಣಾರ್ಣವಕಳಾನಿಧಿ ||

ಹಲ್ಲಣಿಸಿದ ವಾರುವವಿದೆ ಮಗನೆ |
ಮಲ್ಲಾಮಲ್ಲಿಯ ರಥವಿದೆ ಮಗನೆ ||
ಗಜಘಟೆಗಳು ಹಲ್ಲಣಿಸಿವೆ ಮಗನೆ |
ನಿಜಪರಿವಾರಕೆ ಬೆಸಗೊಡು ಮಗನೆ ||
ನೆತ್ತರ ಕಡಲೊಳಗಿಭಕುಲ ಬೀಳೆ |
ಮೊತ್ತದ ತುರಗಂಗಳು ಬೆಂಡೇಳೆ ||
ಮಣಿಮಕುಟದ ಭಟರಟ್ಟೆಗಳಾಡೆ |
ಮಣಿದು ಭೂತ ಸಂಕಳಕುಣಿದಾಡೆ
ಮಾರಿಮೃತ್ಯುಗಳಿಗೋಕರಿ ಹುಟ್ಟೆ |
ಕ್ರೂರ ಜವಂಗತಿಭೀಕರ ಹುಟೆ ||
ರಿಪುಬಲವಂ ಕೊಂದಳಿದಡೆ ತಪ್ಪೆ |
ತಪನಕುಲದ ವಿಜಯಶ್ರೀಯೊಪ್ಪೆ ||
ಧರೆಯನಾಳ್ವ ಸಿರಿಯಂ ಕಳೆದಿಂದು |
ಉರಗನ ವಿಷದಗ್ನಿಯೊಳುಱೆ ಬೆಂದು ||
ಅಡವಿಯೊಳೀಪರಿ ಕೆಡೆವರೆ ವೀರ |
ಪೊಡವಿಯೊಡೆಯನಗ್ಗದ ಸುಕುಮಾರ ||
ಏನು ಮಾಳ್ಪೆ ನಾ ಮಾಡಿರ್ದುದನು |
ತಾನುಂಬುದು ವಿಧಿ ಮಾಡಿದ ಹದನು ||
ಕರುಣಿಸಿ ಕಾಯ್ದೈ ಗೌರೀರಮಣ ||
ನರಕಿಯ ನೋಡೆಲೆ ಅಗಜಾರಮಣ |
ಕರುಣಿಸು ಪಾಪಿಯ ಪಂಪಾಪತಿಯೆ ||
ಕರುಣಿಸನಾಥೆಗೆ ಕಾಶೀಪತಿಯೆ ||

(ರಾಘವಾಂಕ - ಹರಿಶ್ಚಂದ್ರ ಕಾವ್ಯ)

---

# ೨೦. ಶ್ರೀಕೃಷ್ಣನ ಬಾಲಲೀಲೆ

ನೀರದೋತ್ಪಲ ವರ್ಣನಾಡಿದನಾಡಿದಂ ಕಮಲೇಕ್ಷಣಂ ।
ಚಾರುಹಾಸನಿವಾಸನಾಡಿದನಾಡಿದಂ ಸುಭಗಂ ಶುಭಾ ॥
ಕಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ ।
ಸಾರನಾಟಕ ಸೂತ್ರಧಾರಿ ಮುರಾರಿ ಕೈಪಱಿಗಾಡಿದಂ ॥೧॥

ಮತ್ತೊಂದು ಸಮಯದೊಳ್ ಪಾಲ್ಕುಡಿಯಲೊಲ್ಲದಾಟಿಗುಟ್ಟುವ ದಾಮೋದರನಂ ಯಶೋದೆ ಕಂಡು,

ಶಕಟವಿಮರ್ದನಾ ಮುಸಲಿ ಬಾರದ ಮುನ್ನಮೆ ನಮ್ಮ ಹೇಮುಘಂ ।
ಟಿಕೆ ಘಣಿಲೆಂಬ ನಂದಿನಿಯ ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಜೆಂ ॥
ಡಿಕೆ ಬಳೆದಪ್ಪುದೆಂದಬಲೆ ನಂಬಿಸೆ ಪಾಲ್ಕುಡಿದೀಗಳಬ್ಬೆ ಜೆಂ ॥
ಡಿಕೆಯೆನಿತುದ್ದವಾದುದೆನುತುಂ ಬೆಸಗೊಳ್ವ ಮುಕುಂದನೊಪ್ಪುಗುಂ ॥೨॥

ಒಂದಲ್ಲದೊಂದನೆನುತುಮ ।
ದೊಂದುದಿನಂ ಕೃಷ್ಣನಾಟಿಗುಟ್ಟಿದೊಡದನೇ ॥
ನೆಂದುಂ ಮಾಣಿಸಲಱಿಯದ ।
ದೊಂದು ಕಥಾಂತರದೆ ಗೋಪಿ ಮಾಣಿಪ ಬಗೆಯಿಂ ॥೩॥

ಕತೆಯಂ ಕೇಳಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ ।
ಸ್ಥಿತನಾದಂ ಗುರು ಪೇೞೆ ಹುಂ ದಶಶಿರಂ ಕೊಂಡುಯ್ದನಾರಾಮನಾ ॥
ಸತಿಯಂ ತಾನೆನೆ ಪೂರ್ವಮಂ ನೆನೆಯುತುಂ ಹುಂಕೊಳ್ಳದುತ್ಕೋಪಹುಂ ।
ಕೃತಿಯಂ ಮಾಡುತುಮೊಂಡುಗರ್ಚಿ ಕಿಸುಗಣ್ಬಟ್ಟಚ್ಯುತಂ ರಂಜಿಕುಂ ॥೪॥

ಆಡುತ್ತುಂ ಸಹಪಾಂಸು ।
ಕ್ರೀಡಿತರೊಳ್ ಕೃಷ್ಣನಟ್ಟ ಮಣ್ಣಂತಿಂದಂ ॥

ನೋಡೆಂದು ಹಳಧರಂ ಪಿಸು ।
ಣಾಡಲ್ ಕೇಳ್ದೊರ್ವೆ ಗೋಪಿ ಸೆಳೆವಿಡಿದೊಲವಿಂ ॥೫॥

ಹರಿ ಸೀಂ ಮಣ್ದಿಂದೆ ತಿನ್ನಂ ಜನನಿ ಪುಸಿದನೆಮ್ಮಗ್ರಜಂ ತೋಱು ವಕ್ತ್ರಾಂ ।
ತರಮಂ ನೋಡೆಂದು ಬಾಯಂ ತೆಱೆವುದುಮದಱೊಳ್ ವಾರ್ಧಿಯೇೞುಂ ಕುಲೋರ್ವೀ ॥
ಧರವೇೞುಂ ದ್ವೀಪವೇೞುಂ ಬೆರಸು ಜಗಮನೀರೇೞುಮಂ ಕೂಡೆ ಕಂಡ ।
ಚ್ಚರಿವಟ್ಟಂ ಮುಚ್ಚು ಮುಚ್ಚಾನನಮನೆನುತುಮಾಕಾಂತೆ ವಿಭ್ರಾಂತೆಯಾದಳ್ ॥೬॥

(ರುದ್ರಭಟ್ಟ - ಜಗನ್ನಾಥ ವಿಜಯ)

---

## ೨೧. ಗೋಪಿಯರ ಪ್ರೇಮಹೃದಯ

[ಅಕ್ರೂರಂ] ರಾಮಕೃಷ್ಣರನೊಡಗೊಂಡುಯ್ಯಲುದ್ಯೋಗಿಸಿಪುರ್ದಂ ಕಂಡು,

ವನಜಾತಾಕ್ಷನನುಯ್ದು ಗಲ್ಚುವುದಱಿಂದಕ್ರೂರನಾಗಿರ್ದ ಮಾ ।
ಣ್ದನೆ ಹಿಂದೋಳರವಕ್ಕೆ ಮಲ್ಲಿಗೆಗೆ ಬೆಳ್ದಿಂಗಳ್ಗೆ ತಣ್ಗಾಳಿಗಿ ॥
ನ್ನೆನಸುಂ ಕ್ರೂರತೆಯಂ ನೆಗಳ್ಚಿದಪನೋ ಅಕ್ರೂರನೆಂತಾದಪೀ ।
ತನತಿಕ್ರೂರನವೋಘಮೆಂದರಱಿಲಿಂದಕ್ರೂರನಂ ಗೋಪಿಯರ್ ॥೧॥

ದಿತಿಸುತನ ರಾಜಧಾನಿಯ ।
ಚತುರೆಯರಂ ಕಂಡೊಡೆಮ್ಮನೀಗ್ರಾಮ್ಯೆಯರಂ ।
ದಿತಿಜಾರಿ ನೆನೆಗುಮೇ ಮಾ ।
ಳತಿಗೆಱಗಿದ ತುಂಬಿ ನೆನೆಗುಮೇ ಮಿಕ್ಕಲರಂ ॥೨॥

ಆನಗರಮನಿಂ ಪೊಕ್ಕೊಡೆ |
ದಾನವರಿಪು ಗೋಪಪಳ್ಳಿಯಂ ನೆನೆದಪನೇ ||
ಮಾನಸದೊಳಿರ್ಪ ಹಂಸಂ |
ತಾನಿತರಸರೋಜಷಂಡಮಂ ನೆನೆದಪುದೇ ||೧||

ಇಂತಪ್ಪ ಸುಭಗರೂಪನ |
ನಂತನನಿಂ ಕಂಡರಪ್ಪೊಡಾಕಂಸಪುರೀ ||
ಕಾಂತೆಯರೇಂ ಬರಲೀಗುಮೆ |
ತಂತಮ್ಮ ವಿಳಾಸನಿಗಡದಿಂ ಸೆಱೆಗೆಯ್ವರ್ ||೨||

ಒಡನೇಱೆ ರಥಮನಗ್ರಜ |
ನೊಡವರಲಕ್ರೂರನೊಡನೆ ಹರಿ ಪೊಱಮಡಲಾ ||
ಗಡೆ ಪೊಱಮಟ್ಟುದದೊರ್ವಳ ||
ನಿಡುಸುಯ್ಲ ಸಮೀರನೊಡನೆ ಜೀವ ಸಮೀರಂ ||೩||

ಮತ್ತಮಂತಂತೆ ಕಿಱಿದಂತರಮುಂ ದೇವಕೀನಂದನಸ್ಯಂದನಂ ನಡೆಯೆ,

ಒಡನೆಯ್ದಿದುವಲರ್ಗಣ್ಗಳ್ |
ಬಿಡದೆ ಮನಂ ಪೋಯ್ತು ಮನದ ಪಿಂತಣೆ ಧೈರ್ಯಂ ||
ನಡೆಗೊಂಡುದು ಧೈರ್ಯದ ಬೆಂ |
ಬಿಡಿದೊರ್ವಳ ಜೀವಮಿರದೆ ಪೋದತ್ತಾಗಳ್ ||೪||

ಅದಲ್ಲದೆಯುಂ ಮತ್ತೊರ್ವಳ್ ವಿಯೋಗಂ ತನಗೆ ದುಸ್ಸಹಮಾಗೆ,

ಪೊಡೆಯಲರಾತನಕ್ಷಿಗಮಗೋಚರಮಾಗಿರೆ ನಿಟ್ಟಿ ನೋಡಿ ಧೀಂ |
ಕಿಡುವ ರಥಧ್ವಜಾಗ್ರಮನದುಂ ಮಸುಳುತ್ತಿರೆ ತೇರ ಧೂಳಿಯಂ ||
ಬಿಡೆ ನಡೆ ನೋಡಿ ಧೂಳಿಯುಮಡಂಗಿರೆ ಕೃಷ್ಣನ ತೇರ ಧೂಳಿಯ |
ಪ್ಪೊಡಮಿರದಾಯ್ತು ನುತ್ತಬಳೆ ಧೂಳಿವಿಡುತ್ತಿರೆ ಬಾಯ್ವುಲುಂಬಿದಳ್ ||೫||

(ರುದ್ರಭಟ್ಟ - ಜಗನ್ನಾಥ ವಿಜಯ)

## ೨೨. ಅಮೃತಮತಿಯ ಅನುರಾಗ

ಹೃದಯ ಪ್ರಿಯರಂತೊಱಗಿದ |
ಪದದೊಳ್ಗರಟೆಗೆಯು ಜಾವ ದುಕ್ಕಡದುಲಿ ವು ||
ಗ್ಗದ ಪೊತ್ತು ಸೂಟ್ಗಿ ಕರುಮಾ |
ಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ ||೧||

ಬಿನದಕೆ ಪಾಡುತ್ತಿರೆ ನು |
ಣ್ದನಿ ನಿದ್ರೆಗೆ ಕತಕಬೀಜಮಾಯ್ತೆನೆ ತಿಳಿದಾ ||
ವನ ಮೃಗಲೋಚನೆ ಮುಟ್ಟಿದ |
ಮನಮನೆ ತೊಟ್ಟನೆ ಪಸಾಯದಾನಂಗೊಟ್ಟಳ್ ||೨||

ಅಂತೆಸೆದು ಪಾಡುತಿರೆ ತ |
ದ್ದಂತಿಪನತಿನೂತ್ನ ಗೀತಪಾತನವಿಕಲ ||
ಸ್ವಾಂತೆಗೆ ನೋಡುವ ಕೂಡುವ |
ಚಿಂತೆ ಕಡಲ್ವರಿದುದಂದು ಬೆಳಗಪ್ಪಿನೆಗಂ ||೩||

ಮನದನ್ನಳಪ್ಪ ಕೆಳದಿಗೆ |
ಮನಮಂ ಮುಂದಿಟ್ಟು ಬಟ್ಟಿಕ ಕಳಿಪಿದೊಡವಳಾ ||
ತನ ರೂಪುಗಂಡು ಕಣ್ಗಂ |
ಮನಕ್ಕಮುದ್ಗಾರವೆತ್ತು ಭೋಂಕನೆ ಮಗುಳ್ದಳ್ ||೪||

ಅಮೃತಮತಿಯೆತ್ತ ರೂಪಾ |
ಧಮನಷ್ಟಾವಂಕನೆತ್ತ "ಚಿತ್ರಮಪಾತ್ರೇ ||
ರಮತೇ ನಾರೀ"ಯೆಂಬುದು |
ಸಮನಿಸಿತೆಂದು ಬೆಂಡ ಬದಿಗೆ ಕಣ್ಣಿಲ್ಲಕ್ಕುಂ ||೫||

ಎನುತುಂ ಬಂದು ವಿಷಣ್ಣಾ |
ನನೆಯಂ ಮಾರ್ಗಾವಲಗ್ನನೇತ್ರೆಯನುಚ್ಛ್ವ ‖
ಸ ನಿತಪ್ತಾಧರರುಚಿಯಂ |
ಮನುಜೇಂದ್ರಾಂಗನೆಯನೆಯ್ದೆ ಕಂಡಿಂತೆಂದಳ್ ‖೬‖

ಕಂತುವಿನ ಕೆಯ್ಯ ಕೂರಸಿ |
ಯಂತಿರೆ ಗರಗರಿಕೆವಡೆದು ಪೊಳೆವಸಿಯಳೆ ನೀ ‖
ನಿಂತಪ್ಪ ಕಾಮದೇವಂ |
ಗೆಂತೆಂತಾಯ್ದುರಸಿ ಕೂರ್ತೆಯೆಂದಾನಱಿಯೆಂ ‖೭‖

ಈದೊರೆಯನೆಂತು ತೋಱಲ್ |
ಮೇದಿನಿಯೊಳಗಾತನಲ್ಲದಿಲ್ಲೆನೆ ಪೇೞ್ವೇೞ್ ‖
ಕಾದಲನಂತಿರೆ ಚೆಲ್ವನೆ |
ಮೂದವಿ ನೀನೆನ್ನ ಕೊಂಡೆಯೆಂದೊಡೆ ಪೇೞ್ದಳ್ ‖೮‖

ಪಱಿದಲೆ ಕುಱುನೊಸಲುಱುಗ |
ಣ್ಣೊಱೆವಾಯ್ ಹಪ್ಪಳಿಕೆಮೂಗು ಮುರುಟಿದ ಕಿವಿ ಬಿ ‖
ಬ್ಬಿಱಿವಲ್ಕುಸಿಗೊರಲಿಱುದೆರ್ದೆ |
ಪೊಱಂಟ ಬೆನ್ ಬಾತ ಬಸಿಱುಡಂಗಿದ ಜಘನಂ ‖೯‖

ಕಱಿದೊವಲ ಪಱಿಯ ಕುಱುಯಂ |
ತೆಱಿದಂದಂ ಮೆಯ್ಯ ನಾತಮಾತನ ಕೆಯ್ಗಳ್ ‖
ಕುಱುಗಣ್ಣು ಕೂನಬೆನ್ ಕಾಲ್
ಮಱಿಯಿಸುವುದು ಟೊಂಕಮುಱಿದ ಕತ್ತೆಯ ಕಾಲಂ ‖೧೦‖

ಮುಪುಗರಡಿಯ ಮುರುದೊವಲಿಂ |
ದದೆ ಕಱಿಯಂ ತಾಳಕಾಯ ಪೋಳಗೆಯೊಂದಂ ‖
ದವ ಮುರುಡನಷ್ಟವಕ್ತ್ರಂ |
ಷ್ಠೊವಲೊಣಗಿದ ಕೂಷ್ಮಗೊರಡಿನಂದದೆ ಕೊಂಕಂ ‖೧೧‖

ಎಂದೊಡೆ ದೂದವಿಗವಳಿಂ |
ತಂದಳ್ ಗರಗರಿಕೆ ಕೊರಲೊಳೀಕ್ಷಣದೊಳ್ಪಾ ||
ಬರ್ಂದು ಮಿಡುಕೆರ್ದೆಯೊಳೊದವೆ ಪು |
ಳಿಂದನ ಕಣೆಗಟ್ಟೆ ನಿಂದ ವನಹರಿಣಿಯವೊಲ್ ||೧೨||

ಕರಿದಾದೊಡೆ ಕತ್ತುರಿಯಂ |
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ||
ಸ್ಮರಚಾಪಮನಿಱುಕೆಯ್ವರೆ |
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ||೧೩||

ಒಲವಾದೊಡೆ ರೂಪಿನ ಕೋ |
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ ||
ಫಲವೇನಿಂದೆನಗಾತನೆ |
ಕುಲದೈವಂ ಕಾಮದೇವನಿಂದ್ರಂ ಚಂದ್ರಂ ||೧೪||

(ಜನ್ನ - ಯಶೋಧರ ಚರಿತ್ರೆ)



## ೨೩. ಕನ್ನಡ ನಾಡಿನ ವರ್ಣನೆ

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ |
ನೆಲನಂ ಮುತ್ತಿನ ಮಾನಿಸರ್ ಪೊಗೞಲೇನಂ ಬಲ್ಲರೆಂಬೊಂದು ಬ ||
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾನಾಡು ಚೆಲ್ವಾಯ್ತು ಮೆ |
ಲ್ಲೆಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ ||೧||

ಇವು ಪಳ್ಳಿಗಳಿವು ಪಟ್ಟಣ |
ಮಿವು ಕೆಱೆಗಳಿವೆಱಗಿ ನಿಂದ ಮುಗಿಲೋಳಿಗಳಂ ||

ಶಿವು ಕಾಡಿವು ಪೆಸರ್ವಡೆದೊ |
ಪ್ಪುವ ಬನಮೆಂದಱಿದು ಪೇೞ್ವುದರಿಂದಾನಾಡೊಳ್ ||೨||

ಮಲ್ಲಿಗೆಯಲ್ಲದೆ ಸಂಪಗೆ |
ಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂ ||
ಗಲ್ಲದೆ ಮಾವಲ್ಲದೆ ಕೌಂ |
ಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ ||೩||

ಅಡರ್ದೇಱಿ ಕೋಡಗಂಗಳ್ |
ಕಡುಪಿಂದೀಡಾಡೆ ಫೞಿಲನೊಡೆದೆಳಗಾಯಿಂ ||
ದೆಡೆವಿಡಿದೊಸರ್ವೆಳನೀರ್ಗಳ್ |
ಮಡುಗೊಂಡೋವುತ್ತುಮಿರ್ಪುವಲ್ಲಿಯ ಬನಮಂ ||೪||

ಉಱೆ ಕಾಯ್ವ ಬಿಸಿಲೊಳೆಮ್ಮಂ |
ಮಱೆದುಂ ಕೊರಗಿಸದೆ ಪೊರೆದುದೆಂದೊಲವಿಂ ಬಂ ||
ದೆಱಗುವವೋಲ್ ತೆನೆಯಂ ಕಾ |
ಲ್ಗೆಱಗುವ ಕಳವೆಗಳವೆಲ್ಲಿಯುಂ ಸೊಗಯಿಸುಗುಂ ||೫||

ನೆಯ್ದಿಲ್ಗೊಳಂಗಳೆಡೆಯೊಳ್ |
ಕಾಯ್ದೋವದೆ ಪೋರ್ವ ಪಲವು ನೀರ್ವಕ್ಕಿಗಳಿಂ ||
ದೆಯ್ದುಣ್ಮುವ ಸೀರ್ಪನಿಯೊಳ್ |
ತೊಯ್ದೊಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ ||೬||

ಮತ್ತಮಾನಾಡೊಳ್ ಕೀೞೆಂಬುದು ಕುದುರೆಯ ಬಾಯ ಕಬ್ಬಿಣದೊಳ್, ಕವರೆಂಬುದು ಚಪ್ಪರದೊಳ್, ಬಂದಿಯೆಂಬುದು ತೊಡವಿನೊಳ್, ಏಱೆಂಬುದು ನೆಲೆವಾಡದೊಳ್, ಮಡಿಯೆಂಬುದು ಮರುಗದ ತಾಣದೊಳ್, ಮೊಱೆಯೆಂಬುದು ನಂಟರೊಳ್, ಪೊಡೆಯೆಂಬುದು ಬೆಳೆಗೆಯ್ಯೊಳ್, ಕಱೆಯೆಂಬುದು ತುಱುಗಾರ್ತಿಯರೊಳ್, ಪಿಡಿಯೆಂಬುದು ಪೆಣ್ಣಾನೆಯೊಳಲ್ಲದಿಲ್ಲಂತುಮಲ್ಲದೆಯುಂ,

ಪೂದಿದೆಳವಳ್ಳಿಯಿಲ್ಲದಮರಂ ಕೊಳನಿಲ್ಲದ ತೋಂಟಮಾವಲಿ |
ಲ್ಲದ ಕೆಱೆ ಗಂಡುಗೋಗಿಲೆಗಳಿಲ್ಲದ ಬಂದೆಳಮಾವು ಕಾಲ್ಗಳಿ ||
ಲ್ಲದ ತೋಱೆ ತುಂಬಿಯಿಲ್ಲದಲರಂಚೆಗಳಿಲ್ಲದ ಬೆಂಚೆ ಬೇಟಮಿ |
ಲ್ಲದ ಪೆಲೆವೆಣ್ಗಳಿಲ್ಲ ಪೆಸರಿಲ್ಲದ ಮಾನಿಸರಿಲ್ಲದೆಲ್ಲಿಯುಂ ||೭||

(ಆಂಡಯ್ಯ - ಕಬ್ಬಿಗರ ಕಾವ)

---

## ೨೪. ಮನ್ಮಥಪ್ರತಾಪ

ಉಡುವ ಪುಲಿದೊವಲೊ ಕೆಯ್ಯೊಳ್ |
ಪಿಡಿದಾಲಾಗುಳದ ಕೋಲೊ ಬಗರಿಗೆಯೋ ಕೆಂ ||
ಜೆಡೆಯೋ ಪೂಸುವ ಬೂದಿಯೊ |
ಬಡಗೊರವಂಗೇಕೆ ತನಗೆ ಕಾದುವ ಬೆಸನಂ ||೧||

ಎನ್ನೆಡಗೈಯುಗುರ್ವಿಸುವ ಕರ್ಬಿನ ಬಿಲ್ಗೊನೆಯಲ್ಲಿ ಬಾರದಿ |
ರ್ದನ್ನೆಗಮೆನ್ನ ಜೇವೊಡೆಯ ಬಲ್ಲುಲಿ ನಾಲ್ದೆಸೆಯಂ ಪಳಂಚದಿ ||
ರ್ದನ್ನೆಗಮೆನ್ನ ಪೂಗಣೆಗಳೋವದೆ ಬೆನ್ನನೆ ಪೋಗಿ ನಾಂಟದಿ |
ರ್ದನ್ನೆಗಮುಂಟು ತನ್ನ ಕಡುಸೊರ್ಕು ಬಱಿಕ್ಕದು ಪಾಱಿ ಪೋಗದೇ ||೨||

ಕಡಲೊಳ್ ಮೆಯ್ಗರೆದಿರ್ದೊಡಂ ಪೊಡವಿಯೊಳ್ ಪೊಕ್ಕಿರ್ದೊಡಂ
ಬೆಟ್ಟದೊಳ್ |
ನಡೆದೇಱಿರ್ದೊಡಮುಳ್ಕುತುಂ ದೆಸೆಗಳೊಳ್ ಬಳ್ಕುತ್ತಡಂಗಿರ್ದೊಡಂ ||
ಕಡುಪಿಂದೊರ್ಮೆಯೆ ಪೂವಿನಂಬದಟರಂ ಮೆಯ್ದಾಗಿ ನೋಯಿಪ್ಪುದೆಂ |
ದೊಡೆ ಕೇಳೆನ್ನಯ ಬಾರಿಯೊಳ್ ಕಿಸುಳೆ ತಾನಿನ್ನೆತ್ತ ಪೋಗಿರ್ದಪಂ ||೩||

ಆದಟನಳುರ್ಕೆಯಂ ಕಿಡಿಸಲಾಂಬರನೋ ತನಗೊಂದು ಕರ್ಬುಸಾ |
ಲದೆ ಮಱಿದುಂಬಿ ಸಾಲದೆ ಪಸುರ್ಮಿಡಿ ಸಾಲದೆ ಬಂದ ಮಾವು ಸಾ ||
ಲದೆ ಸುೞಿವಂಚೆ ಸಾಲದೆಳಗೌಂಗುಱಿ ಸಾಲದೆ ಕಾಯ್ತ್ತತೆಂಗು ಸಾ |
ಲದೆ ಪೊಸಸೀಱಿವೆಣ್ಣನುಡಿ ಸಾಲದೆ ತೆಂಕಣ ಗಾಳಿ ಸಾಲದೇ ||೭||

(ಆಂಡಯ್ಯ—ಕಬ್ಬಿಗರ ಕಾವ)

---

## ೨೫. ಕಾವಬಸಂತರ ಗಾಡಿ

ಬಿಳಿಯ ನನೆಯ ಕಣೆಗೆ ನಾಡೆ |
ಪಗೆವರೊಡಲು ಸುಗಿಯೆ ಕೂಡೆ ||
ನೆಲನನೊಂದೆ ಕೊಡೆಯಿನಾಳ್ದು |
ಮಿಸುಪ ಜಸಮೆ ಸಿಮಿರೆ ಕೇಳ್ದು ||೧||

ಕುಳಿರ್ವ ಪೂಗೊಳಂಗಳಲ್ಲಿ |
ತಳಿರ ಕಾವಣಂಗಳಲ್ಲಿ ||
ಪಳುಕುವೆಸದ ಬೆಟ್ಟದಲ್ಲಿ |
ಪರಿವ ತೊಱೆಯ ತಡಿಗಳಲ್ಲಿ ||೨||

ತುಂಬಿವಿಂಡಿನಂತೆ ಪಾಡಿ |
ಜಕ್ಕವಕ್ಕಿಯಂತೆ ಕೂಡಿ ||
ಪೆಸೆಯುನಿಚ್ಚೆಯಿಂದೆ ನೋಡಿ |
ಸೊಗಯಿಪಂಚೆಯಂತಿರಾಡಿ ||೩||

ಪೊಳೆವ ತಳಿರ ನನೆಯ ಮೊನೆಯ |
ತುಱುಗಿದಲರ ಬಳಸುವೆಲರ ||
ಮಿಳಿರ್ವ ಮಿಡಿಯ ಗಿಳಿಯ ನುಡಿಯ |
ಪರಿವ ಕಾಲ ಕರ್ವುಗೋಲ ||೪||

ಚೆಲ್ವನಾಂತು ತೋರ್ಪ ಬನದ |
ನಡುವೆ ತನ್ನದೊಂದು ಬಿನದ ||
ಮಮರೆ ಮಿಱುಪ ಬಟ್ಟವೊಗದ |
ಸೊಬಗು ರೂಢಿವಡೆದ ನೆಲೆಯ ||೫||

ಚೆನ್ನೆಯರ್ಕಳೊಡನೆ ಕೂಡಿ |
ಮುಗುಳ ಸರಮನಡರೆ ಸೂಡಿ ||
ನಲ್ಲರೊಡನೆ ಕೂರ್ಮೆಯಿಂದೆ |
ಕಾವನೊಡನೆ ಪೆರ್ಮೆಯಿಂದೆ ||೬||

ಮಾವಿನಡಿಯೊಳಾಡುತುಂ |
ಪಾಡನೆಯ್ದೆ ಕೇಳುತುಂ ||
ಪೊಟ್ತನಿಂತು ಕಳೆಯುತುಂ |
ತೊಲಗದಿರ್ದರೆಸೆಯುತುಂ ||೭||

ಇಂತು ಕಾವನುಂ ಬಸಂತನುಂ ರೂಢಿವೆತ್ತು ಗಾಡಿಯಿಂದೊಪ್ಪಿದರ್.

(ಆಂಡಯ್ಯ—ಕಬ್ಬಿಗರ ಕಾವ)



# ೨೬. ಮಾಯಾದೇವಿಯ ಬಾಲ್ಯ

ಅದಱೊಳವನೀಕಾಂತೆಗೊಪ್ಪುವ |
ವದನವೋ ಶೃಂಗಾರಸಾರವ |
ಸದನವೋ ಸೊಬಗಿನ ಸುಮಾನದ ಸುಖದ ನೆಲೆವೀಡೋ ||
ಸುದತಿರತ್ನಗಳೊಗೆವ ಚೆಲುವಂ |
ಬುಧಿಯೊ ಪೇೞೆನೆ ಸಕಲಸಂರಂ |
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು ||೧||

ಆವಕಾಲದಲಾದಡೆಯು ಫಲ |
ವೀವುತಿಹ ಪಲತೆಱದ ನೇಱಿಲು |
ಮಾವು ದಾಡಿಮ ತೆಂಗು ನಾರಂಗಾದಿ ತರುಲತೆಯ ||
ಠೀವಿ ಚರಿಸುವ ಶುಕಪಿಕಭ್ರಮ |
ರಾವಳಿಯ ನಾನಾವಿಧದ ಶೋ |
ಭಾವಹವೆ ತಾನಾದುದಾ ಬನವಸೆಯುಲುದ್ಯಾನ ||೨||

ಕೇರಿ ಕೇರಿಯ ತಳಿರಿಡಿದ ಗುಡಿ |
ತೋರಣಂಗಳ ಪರಿಮಳಿಸುತಿಹ |
ಸಾರಣೆಯ ಕಾರಣೆಯ ಗಂಧೋದಕದ ಚಳಯುಗಳ ||
ಸೌರಭದ ಪೂವಲಿಗಳಲಿ ಶೃಂ |
ಗಾರಿಸಿದ ಬೀದಿಗಳ ಸೊಬಗಿನ |
ಸಾರದಲಿ ಸಮನಿಸಿದುದತಿಸಂರಂಭ ಬನವಸೆಯು ||೩||

ವೇದಶಾಸ್ತ್ರಾಗಮ ಪುರಾಣವ |
ನೋದುವ ಧ್ವನಿಯಿಂದ ಖಳರೊಳು |
ಕಾದಿ ಗೆಲಿದತಿಬಳರ ಕೈವಾರಿಸುವ ದನಿಯಿಂದ ||

ಬೀದಿಬೀದಿಗಳಲ್ಲಿ ವಿಗಡವಿ |
ರೋಘಮದಗಜತತಿಯ ಬೃಂಹಿತ |
ನಾದದಲಿ ಕಳಕಳತೆವೆತ್ತಿಹುದಾಗಳಾಪುರವು ||೪||

ನುಡಿದು ಜಾಣರು ಸಕಲಬುದ್ಧಿಯ |
ನಡೆದು ಜಾಣರು ನಿಖಿಲರೀತಿಯ |
ಕೊಡಲು ಜಾಣರು ಕುಂದದಂತಿರಲರ್ಥಿಗರ್ಥವನು ||
ಪೊಡವಿಗಿದು ಪೊಸತೆಂಬ ಜನಪದ |
ವಿಡಿದು ಕಿಕ್ಕಿಱಿದಿರುವ ಬನವಸೆ |
ಗೊಡೆಯನಾಗಿರುತಿರ್ದನ್ಸೈ ಮಮಕಾರಭೂಪಾಲ ||೫||

ಆರು ಬಣ್ಣಿಸಬಲ್ಲರಾ ಮಮ |
ಕಾರನೃಪನ ಮಹಾಪ್ರತಾಪದ |
ಶೂರತೆಯ ಸಾಹಸವ ನಾನಾಸಕಲಗುಣಗಣವ ||
ಧಾರಿಣಿಯಲಪ್ರತಿಮನಾಗಿಯು |
ದಾರತೆಯಲಿರುತಿರ್ಪನಾತಗೆ |
ನಾರಿಯಾಗಿಹಳೊಬ್ಬಮಾನಿನಿ ಮೋಹಿನೀದೇವಿ ||೬||

ಭಾವಿಸಲು ಮಮಕಾರಮೋಹಿನಿ |
ದೇವಿಯರ ಬಸಿಱಿನಲಿ ವರರಾ |
ಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ ||
ದೇವದಾನವಮಾನವರುಗಳ |
ಡಾವಣಿಯ ದನವಾಗಿ ಕಟ್ಟುವ |
ಭಾವೆ ಮಾಯಾದೇವಿ ಜನಿಸಿದಳಖಿಲವಿಭವದಲಿ ||೭||

ಹಲವು ಕಾಲಕೆ ಹರಸಿ ಹೆತ್ತರು |
ಲಲಿತಗಾತ್ರಿಯ ವಿಮಲನೇತ್ರಿಯ |
ವಿಲಸಿತವ್ಯಾಮೋಹನವರಸಭರಿತಪಾತ್ರಿಯನು ||

ಬಳಿಕ ಬುಧರಿಗೆ ಸಕಲರಿಗೆ ಹೊಂ |
ಗಳನು ಭೂಷಣವಸ್ತ್ರ ರತ್ನವ |
ಸೊಲಿದು ದಾನವ ಮಾಡಿದನು ಮುಮುಕಾರಭೂಪಾಲ ||೮||

ಸಿಸುವ ನೋಡಿದ ಕಣ್ಗೆ ಮಾಯವೆ |
ಮುಸುಕುವುದು ಮನಮುಚ್ಚುವುದು ಮೋ |
ಹಿಸುವುದೀಪರಿ ಜನಸಿಜನಕಾದ್ಯರುಗಳೆಲ್ಲರಿಗೆ ||
ವಸುಮತೀಪತಿ ಬಳಿಕಲತಿಸಂ |
ತಸದೊಳಾತ್ಮಜೆಗಖಿಳವಿಭವದಿ |
ಪೆಸರನಿಟ್ಟನು ಮಾಯೆಯೆಂಬ ನವೀನನಾಮವನು ||೯||

ಉಲಿವ ಗೆಜ್ಜೆಯು ಕಾಲ ಕಡಗದ |
ಘಲಿಘಲಿಸುವಂದುಗೆಯು ರತುನದ |
ಉಲಿಯು ಸೂತ್ರದ ಝಣಝಣತ್ಕರಿಸುವ ಕಂಕಣದ ||
ಹುಲಿಯುಗುರ ಬಂದಿಯು ಸುಡಾಳದ |
ಲೊಲೆವ ಮಾಗಾಯಿಗಳ ಹೊಳೆವರ |
ಳಿಲೆಯು ಮಿಸುಗುವ ಬಾಲದೊಡಿಗೆಯು ಮಾಯೆಗಿಕ್ಕಿದರು ||೧೦||

ಬೆಚ್ಚಸೀರೆಜುಂದಿಟ್ಟು ತೊಟ್ಟಲೊ |
ಳೊಚ್ಚಅಗುದುಗುಲದಲಿ ತನುವನು |
ಮುಚ್ಚಿ ಸೊಡರಕ್ಕಿಯಲಿ ಬೊಟ್ಟಿಟ್ಟೊಲವಿನಲಿ ಹರಸಿ ||
ಸಿಚ್ಚದಲಿ ತೂಪಿಜುಂದು ತೂಗುವ |
ನಚ್ಚುಮಚ್ಚಿನ ದಾದಿಯರ್ಗಳಂ |
ಮೆಚ್ಚಸೀಯುತ ಹೆಚ್ಚುತಿರ್ದಳು ಮೋಹಿಸೀದೇವಿ ||೧೧||

ಹಲಗೆಮಾಣಿಕದೊಟ್ಟಲಲಿ ಮ |
ಗ್ಗುಲಲಿ ಮಲಗಿ ನಿರೀಕ್ಷಿಸುತ ಮಾ |
ರ್ಪೊಳೆವ ತನ್ನನೆ ಕಂಡು ನಲಿಗುತ ನಗುತ ಕೈದುಡುಕಿ ||

ಸೆಳೆದು ತೆಗೆದರೆ ಬಾರದಿರಲಾ |
ನೆಲನನೊದೆಯುತ ಕಾಲ ಗೆಜ್ಜೆಯ |
ಗಲುಕನಾಲಿಪ ಮಾಯೆ ಮೆಱೆದಳು ಬಾಲಲೀಲೆಯಲಿ ||೧೨||

ಒಮ್ಮೆ ಮಮಕಾರಾವನೀಪನ |
ನೊಮ್ಮೆ ಮೋಹಿನಿದೇವಿಯನು ಮ |
ತ್ತೊಮ್ಮೆ ತನ್ನವನಾಡಿಸುವ ಕೆಳದಿಯರ ತಂಡವನು ||
ಹೆಮ್ಮೆಗೊಳಿಸುತ ಸುಖಮುಖವ ಹೊಱ |
ಹೊಮ್ಮಿಸುತ ನೆಱೆ ಬಾಲಲೀಲೆಯ |
ಸೊಮ್ಮ ಸೂಱೆಯ ಕೊಡುತಲಿರ್ದಳು ಮಾಯೆ ಮೋಹಿನಿಗೆ ||೧೩||

ಬೀಱುತಿರ್ದಳು ಮುದ್ದುತನವನು |
ಹೇಱುತಿರ್ದಳು ಸಕಲ ಚೆಲುವನು |
ತೋಱುತಿರ್ದಳು ಜಗದ ಜಂಗುಳಿಗಾಡುವಂದವನು ||
ಸಾಱುತಿರ್ದಳು ಸಕಲಸೊಬಗನು |
ಮಿಾಱುತಿರ್ದಳು ದಿನದಿನಕೆ ಕಳೆ |
ಯೇಱುತಿರ್ದಳು ಮಾಯೆ ವಿವಿಧವಿಲಾಸವೃತ್ತಿಯಲಿ ||೧೪||

ಹಿಡಿಹಿಡಿದುಕೊಂಡಟ್ಟಿಯಲಿ ಬೆಂ
ಬಿಡದೆ ಶಿಕ್ಷಾಚಾರ್ಯತನದಲಿ |
ಜಡಿದು ಝುಂಕಿಸಿ ಮುದ್ದುತನ ಮಿಗೆ ಮಾಯೆ ತನ್ನಂತೆ ||
ನಡೆಯ ಕಲಿಸಿದಳಂಚೆವಿಂಡಿಗೆ |
ನುಡಿಯ ಕಲಿಸಿದಳರಗಿಳಿಗೆ ಸರ |
ವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲೆಗೆ ||೧೫||

(ಚಾಮರಸ - ಪ್ರಭುಲಿಂಗಲೀಲೆ)

---

## ೨೭. ದ್ರೌಪದೀಸ್ವಯಂವರ

ರಾಯಸಭೆ ನಗಲ್ಕೈದಿ ಯಂತ್ರದ ।
ದಾಯವನು ನೆಱೆ ಗೆಲಿದು ನಿರ್ಜರ ।
ರಾಯನಂದನ ಕಾದಿ ಗೆಲಿದನು ಸಕಲರಿಪುನೃಪರ ॥

ಕೇಳು ಜನಮೇಜಯಧರಿತ್ರೀ ।
ಪಾಲ ಪಾಂಚಾಲಿಯ ಮನೋರಥ ।
ಶಾಲೆಯಲಿ ಸಾರಿದರೆಲ್ಕೆ ಸಭೆಯಲಿ ಮಹೀಸುರರ ॥
ಏಳಿ ಭುಜಬಲವುಳ್ಳವರು ವಿ ।
ಪ್ರಾಳಿಯಲಿ ಬಿಲುವಿಡಿದು ಯಂತ್ರದಿ ।
ಕೋಲುಗಳ ಕೇವಣಿಪುದೆಂದರು ಹೊಯ್ದು ಡಂಗುರವ ॥೧॥

ಎಂದು ಸಾರಿದ ದನಿಯನಾದ್ವಿಜ ।
ವೃಂದವಾಲಿಸಿ ನಮಗಿದೇಕರ ।
ವಿಂದವದನೆಯ ತೊಡಕು ತೆಗೆ ನಾವಾರು ಧನುವಾರು ॥
ಬಂದ ದಕ್ಷಿಣೆ ಮೃಷ್ಟಭೋಜನ ।
ದಿಂದ ತುಷ್ಟರು ನಾವು ನಮಗಿದ ।
ಱಿಂದ ಬಹ ದುಷ್ಕೀರ್ತಿ ಬರಲೆಂದುದು ಬುಧವ್ರಾತ ॥೨॥

ವಚನಶೂರರು ನಾವು ಪಾರ್ಥಿವ ।
ನಿಚಯವೇ ಭುಜಶೂರರನಿಬರ ।
ನಚಲಧನು ಭಂಗಿಸಿತು ನಮಗೀವಿದ್ಯೆ ವೈದಿಕವೇ ॥
ಉಚಿತವಲ್ಲಿದು ನಮ್ಮ ಸಾಹಸ ।
ರಚನೆಯನು ನೋಡುವೊಡೆ ಪಂಡಿತ ।
ನಿಚಯವಿದಿರಲಿ ನಿಲಲಿ ತೋಱುವೆವಲ್ಲಿ ವಿಸ್ಮಯವ ॥೩॥

ಭರತದಲಿ ವೈದ್ಯದಲಿ ಕಾವ್ಯಸು |
ವಿರಚಿತಾಲಂಕಾರದಲಿ ಗಜ |
ತುರಗಲಕ್ಷಣದಲಿ ಸಮಾಹಿತಮಂತ್ರತಂತ್ರದಲಿ ||
ಸರಸಕವಿತಾರಚನೆಯಲಿ ವಿ |
ಸ್ತರದುಪನ್ಯಾಸದಲಿ ಭೂಪತಿ |
ಕರೆಸಿ ನೋಡಲಿ ನಮ್ಮನೆಂದರು ದ್ವಿಜರು ತಮತಮಗೆ ||೪||

ಅಲ್ಲದಿರ್ದರೆ ಸೋದಿಸಿದ ತನಿ |
ಬೆಲ್ಲವಿಕ್ಕಿದ ಹೂರಿಗೆಯ ಮೊದೆ |
ಯಲ್ಲಿ ಪರಡಿಯ ಸೇವಿಗೆಯ ಪರಿಪರಿಯ ಪಾಯಸದ ||
ಪುಲ್ಲಿಗೆಯ ತತ್ಸವಿಯ ಮಂಡಿಗೆ |
ಯಲ್ಲಿ ನವಘೃತಸೂಪದಂಶಕ |
ದಲ್ಲಿ ನೋಡಲಿ ನಮ್ಮನೆಂದುದು ಧೂರ್ತವಟುನಿಕರ ||೫||

ರಸದ ಹೊರಲೇಪದಲಿ ಹುದುಗಿದ |
ಮಿಸುನಿಯಂತಿರೆ ಜೀವಭಾವ |
ಪ್ರಸರದೊಳಗವಲಂಬಿಸಿದ ಪರಮಾತ್ಮನಂದದಲಿ ||
ಎಸೆವ ವಿಪ್ರಾಕಾರದಲಿ ರಂ |
ಜಿಸುವ ಭೂಪತಿ ತತ್ಸಭಾಸ |
ದ್ವಿಸರಮಧ್ಯದೊಳಿರ್ದು ಕೇಳಿದನೀ ಮಹಾಧ್ವನಿಯ ||೬||

ನೋಡಿದನು ತಮ್ಮನನು ಸನ್ನೆಯ |
ಮಾಡಿದೊಡೆ ಕೈಕೊಂಡನವನಿಪ |
ಗೂಡಿ ಕುಂತಿಗೆ ಭೀಮಸೇನಂಗೆಱಗಿ ಮನದೊಳಗೆ ||
ಕೂಡೆ ಕುಳ್ಳಿರ್ದಖಿಲವಿಪ್ರರ |
ನೋಡಿ ಮೆಲ್ಲನೆ ದೋತ್ರ ದರ್ಭೆಯ |
ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ ||೭||

ಏನು ಸಿದ್ಧಿಯುಪಾಧ್ಯರದ್ದಿರಿ |
ದೇನು ಧನುವಿಂಗಲ್ಲಲೇ ತಾ |
ನೇನು ಮನದಂಘವಣೆ ಬಯಸಿದಿರೇನು ಕಾಣಿಸಿಯ ||
ವೈನತೇಯನ ವಿಗಡಿಸಿದ ವಿಸ |
ವೇನು ಸದರವೊ ಹಾವಡಿಗರಿಗಿ |
ದೇನು ನಿಮ್ಮುತ್ಸಾಹವೆಂದುದು ಘೂರ್ತವಟುನಿಕರ ||೮||

ಮದುವೆ ಬೇಕೇ ಶ್ರೋತ್ರಿಯಸ್ತ್ರೀ |
ಮದಲಿ ಕನ್ಯಾರ್ಥಿಗಳು ನಾವೆಂ |
ಬುದು ನಿಜಾನ್ವಯವಿದ್ಯೆಯಲಿ ಕೊಡುವುದು ಪರೀಕ್ಷೆಗಳ ||
ಮದುವೆಯು ಹುದಿದು ಸೌಖ್ಯಪ್ರಣ್ಯ |
ಪ್ರದವು ಭೂದೇವರಿಗೆ ನೀಂ ನೆನೆ |
ದುದು ಭಗೀರಥಯತ್ನವೆಂದುದು ಭೂಸುರವ್ರಾತ ||೯||

ನೀವು ಸ್ವೈರಿಸಿ ನಿಮ್ಮ ಕಾರು |
ಣ್ಯಾವಲೋಕನಮುಂಟಲೇ ಸ |
ದ್ಭಾವದಲಿ ನೀಂ ರಚಿಸಿದಾಶೀರ್ವಾದ ಶಕ್ತಿಯಲಿ ||
ನಾವು ವಿಜಯರು ಚಾಪಯಂತ್ರವಿ |
ದಾವ ಘನವೆಂದರ್ಜುನನ ಸಂ |
ಭಾವನೋಕ್ತಿಗೆ ಸಿಲ್ಲದವರೋಡಜಾಪರು ತಮ ತಮಗೆ ||೧೦||

ಕೆಲರು ಹೋಗದಿರೆಂದು ಜಱಿದರು |
ಕೆಲರು ತಾನೇ ಬಲ್ಲನೆಂದರು |
ಕೆಲರು ನುಡಿದರು ವಿಪ್ರಸಭೆಗಪಹಾಸ್ಯವಹುದೆಂದು ||
ಕೆಲರು ತಪ್ಪೇನೆಂದು ಕಳೆದರು |
ಕೆಲರು ಭದ್ರಾಕಾರನೀತಂ |
ಗಳುಕುವುದು ಧನು ಭಾಗ್ಯಮುಖನೆಂದುದು ಬುಧಸ್ತೋಮ ||೧೧||

ತೊಟ್ಟ ಹೊಸ ಯಜ್ಞೋಪವೀತದ |
ಮಟ್ಟ ನೊಸಲಲಿ ಕುಶೆಯ ಕರಡಿಗೆ |
ಕಟ್ಟಿಯಿರುಕಿದ ಕಕ್ಷ ಬೆರಳಲಿ ಮುಜಿಂದ ದರ್ಭೆಗಳ ||
ಉಟ್ಟ ಬಾಸರ ಬಳಲಗಚ್ಚೆಯ |
ಅಟ್ಟಹಾಸದ ಜನದ ನಗೆಗಳ |
ನಟ್ಟವಿಗನೋಸರಿಸಿ ಸಭೆಯುಲಿ ಮೆಲ್ಲನೈತಂದ ||೧೨||

ಧನು ತನಗೆ ನೆಗಹಲ್ಕೆ ಕೃಷ್ಣಾ |
ಜಿನವೊ ಸಾಲಗ್ರಾಮದೇವರೊ |
ವಿನುತ ತುಳಸಿಯೊ ಕುಶವೊ ದರ್ಭೆಯೊ ಸಮಿಧೆಗಳ ಹೊರೆಯೊ ||
ನೆನೆದ ತಿಲವೋ ಮೋಣಿದಾಪಾ |
ಸನದ ಕೊಳವಿಯೊ ಬಣಗುವಿಪ್ರನ |
ನೆನಹ ನೋಡಿರೆ ಘನವಲಾ ದ್ರೌಪದಿಯ ಸೌಭಾಗ್ಯ ||೧೩||

ಇತ್ತನೋಡೌ ತಾಯೆ ಹಾರುವ |
ರತ್ತ ಗಡ್ಡದುಪಾಧ್ಯರನು ತಾ |
ವೆತ್ತುವರು ಗಡ ಧನುವನಿಸುವರು ಗಡ ತಿಮಿಂಗಿಲನ ||
ಹೊತ್ತುಗಳೆವೊಡೆ ಲೇಸು ಬಳಿಕಿ |
ನ್ನುತ್ತಮರಲಾ ವಿಪ್ರರೆನೆ ತಲೆ |
ಗುತ್ತಿ ನಾಚಿದಳುಂಗುಟದೊಳಾಸುತ ಮಹೀತಳವ ||೧೪||

ಅವನಿಪತಿ ಕೇಳಿತ್ತಲೀ ಪಾ |
ರ್ಥಿವರ ಪರಿಹಾಸವನು ಕಾಂತಾ |
ನಿವಹದಲಿ ನಿಬ್ಬರದ ನುಡಿಗಳನಾ ಮಹೀಸುರರ ||
ವಿವಿಧಕಟುಮಧುರೋಕ್ತಿವಿನ್ಯಾ |
ಸವನು ಕೇಳುತ ಮುಗುಳನಗೆಯಲಿ |
ನವಮುದದ್ವಿಪಗತಿಯ ಗರುವಾಯಿಯಲಿ ನಡೆತಂದ ||೧೫||

ಹೊಯ್ದು ತಿರುವನು ಸೆಳೆದು ಕಿವಿವರೆ |
ಗೊಯ್ದಸಿದು ಹದವಿಲ್ಲಲಾ ಬಲು |
ಹಾಯ್ದುದಕಟಾ ಬಱಿದೆ ಹೆದರಿತು ಮಾಗಧಾದಿಗಳು ||
ಕಯ್ದುಗೆದರಿದಱೊಳಗೆ ಹೆಸರೆನ |
ಗೆಯ್ದು ಬೇಕೆಂದೈಸಲೇ ಎನು |
ತಯ್ದು ಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ ||೧೬||

ತೂಗಿ ಕಿವಿವರೆಗುಗಿದು ಯಂತ್ರವ |
ತಾಗಿಸಿದನಂಬಿನಲಿ ಪಾರ್ಥನ |
ಲಾಗುವೇಗವನಾರು ಬಲ್ಲರು ಯಂತ್ರಭೇದದಲಿ ||
ಜಾಗು ಧಣು ಧಣು ಪೂತು ಕಾರ್ಮುಕ |
ಯೋಗಸಿದ್ಧನೆ ಮಝುರೆ ಕೋದಂ |
ಡಾಗಮತ್ರಿಪುರಾರಿಯೆಂದುದು ವಂದಿಸಂದೋಹ ||೧೭||

ಆಯೆನುತ ಬೊಬ್ಬಿರಿದು ಪಸ್ರನಿ |
ಕಾಯ ಕುಣಿದುದು ಕಮಲಮುಖಿ ನಿ |
ರ್ದಾಯದಲಿ ನೇಱಿದಳು ಹಾಱುವಗೆನುತ ಹರ್ಷದಲಿ ||
ಆ ಯುವತಿಜನಜಲಧಿ ಮುಸಗಿತು |
ಬಾಯ ಮೌನದ ಬೆರಳ ಮೂಗಿನ |
ರಾಯರಿದ್ದರು ಬಿಗಿದ ಬೆಱಗಿನ ಪೊತ್ತ ದುಗುಡದಲಿ ||೧೮||

ಮೊಳಗಿದುವು ನಿಸ್ಸಾಳತತಿ ಹೆ |
ಗ್ಗಳದ ಪೆರ್ಚಿನೊಳಲ್ಲಿ ದಿವಿಜಾ |
ವಳಿಯ ದುಂದುಭಿರವದಲುಬ್ಬಿದ ಸಾಧುವಾದಗಳ ||
ಕಳಕಳದ ಕೊಲ್ಲಣಿಗೆಯಲಿ ಪೂ |
ಮಳೆಯ ಪೂರದ ಹರಹಿನಲಿ ಜನ |
ಮುಳುಗಿತದ್ಭುತ ರಭಸವಳ್ಳಿಱಿದುದು ಜಗತ್ರಯವ ||೧೯||

ನಳಿನಮುಖಿ ದಂಡಿಗೆಯೊಳೈತಂ |
ದಿಳಿದಳೀತನ ಹೊರೆಯೊಳಾಗಳೆ |
ಕಳಕಳದೊಳೊಳತೋಟಿ ಮಸಗಿತು ಹರುಷಲಜ್ಜೆಯಲಿ ||

* * * * * * *

ತರುಣಿ ನಿಜತನುಪರಿಮಳದೊಳುಜ್ಜಿ |
ಹೊರೆದ ಹೂವಿನ ದಂಡೆಯನು ನಿಜ |
ವರನ ಕೊರಳಲಿ ಹಾಯ್ಕಿದಳು ಜಯವೆನೆ ಸುರಸ್ತೋಮ ||೨೦||

(ಕುಮಾರವ್ಯಾಸ - ಮಹಾಭಾರತ)

## ೨೮. ಉತ್ತರನ ಪೌರುಷ

ಕೇಳು ಜನಮೇಜಯ ಸುಯೋಧನ |
ನಾಳು ಮುಸುಕಿತು ತುರುಗಳನು ಮೇ |
ಲಾಳು ಕವಿದುದು ಭೀಷ್ಮ ಕರ್ಣ ದ್ರೋಣ ಮೊದಲಾಗೆ ||
ಕೋಲ ಸೂಠಿಯ ಸರಿವಳೆಗೆ ಗೋ |
ಪಾಲಪಡೆ ಮುಗ್ಗಿದುದು ಗೋವರ |
ಸಾಲ ಹೊಯ್ದರು ಕರ್ಣರಕುನಿಜಯದ್ರಥಾದಿಗಳು ||೧||

ಮೇಲುದಳಕಿದಿರಾಗಿ ತುರುಹರಿ |
ಗಾಳಿಗದೊಳೊಡೆಮುಗ್ಗಿ ಗೋವರು |
ದೂಳಿಗೋಟೆಯಕೊಂಡರಮರರ ರಾಜಧಾನಿಯನು ||
ಸಾಲೊಡೆದು ಕೆಟ್ಟೋಡಿದರು ಗೋ |
ಪಾಲನೊಬ್ಬನ ಹಿಡಿದು ಮೂಗಿನ |
ಮೇಲೆ ಸುಣ್ಣನ ಕೊಡೆಗುಬಿಟ್ಟರು ಹಗೆಯ ಪಟ್ಟಣಕೆ ||೨||

ಗಣನೆಯಿಲ್ಲದೆ ನಿನ್ನೆ ಸಮರಾಂ |
ಗಣದ ಘಾಂಣೆ ನೂಕಿತೆಲವೋ |
ರಣದ ವಾರ್ತೆಯದೇನೆನುತ ಜನವೆಲ್ಲ ಗಜಬಜಿಸೆ ||
ರಣವು ಕಿಂದಲ್ಲೆನುತ ಘಗೆ ಸಂ |
ದಣಿಸಲವನ್ಸ್ವೈತಂದು ಮೋಳದ |
ಗಣಿಕೆಯರ ಮಧ್ಯದಲಿ ಮೊಱೆದಿರೆ ಕಂಡನುತ್ತರನ ||೩||

ಏಳು ಮನ್ನೆಯಗಂಡನಾಗು ನ್ನೃ |
ಪಾಲ, ಕೌರವರಾಯ ತುಱುಗಳ |
ಕೋಳಹಿಡಿದನು ಸೇನೆ ಬಂದುದು ಧರಣಿಯಗಲದಲಿ ||
ದಾಳಿ ಬರುತಿದೆ ಕರೆಸಿಕೋ ನೀ |
ನ್ನಾಳುಕುದುರೆಯು ರಾಣಿವಾಸದ |
ಗೂಳೆಯವ ತೆಗೆಸೆಂದು ನುಡಿದನು ಬಿನ್ನಹದ ಹದನ ||೪||

ಏನೆಲವೊ ತುದಿಮೂಗಿನಲಿ ಬಿಳು |
ಪೇನು ಘಗೆ ಯೊಯ್ಲೇಕೆ ಬಂದೆಯಿ |
ದೇನು ನಿನ್ನಿನ ರಣವನ್ನೈಯನು ಗೆಲಿದುದೇನಾಯ್ತು ||
ಏನು ಭಯ ಬೇಡಿನ್ನು ಕಲಹನಿ |
ದಾನವಾರ್ತೆಯದೇನೆನಲು ಕುರು |
ಸೇನೆ ಬಂದುದು ತುರುವ ಹಿಡಿದುದು ಬಡಗದಿಕ್ಕಿನಲಿ ||೫||

ಒಳಗೆ ನೀ ಕಾಮವೊಡೆ ದುರ್ಗವ |
ಬಲಿಸು ಧೈರ್ಯಾದಿ ಹಿಂದುಗಳೆಯದೆ |
ನಿಲುವ ಮನ ನಿನಗುಂಟೆ! ನೀ ಕಾದಲಿಕೆ ನಡೆಯೆನಲು ||
ಕೆಲಬಲನ ನೋಡಿದನು ವಿಗಾಸೆಯ |
ನಲುಗಿದನು ತನ್ನಿದಿರ ಮೋಳವ |
ಲಲನೆಯರ ಮೊಗನೋಡಲುತ್ತರ ಭಟನು ನಗುತೆಂದ ||೬||

ಎಸೆವ ಬಲ ಘನವಾದೊಡೇನದು |
ನಿನಗೆ ಗಹನವೆ ಜೀಯ, ಜಗದಲಿ |
ದಿನಪನಿಟ್ಟಂತೆ ದಿಟ್ಟತನವೇ ತಮದ ಗಾವಳಿಗೆ ||
ಬಿನುಗುರಾಯರ ಬಿಂಕ ಗೋವರ
ಮೊನೆಗೆ ಮೊಳಕೆಯಿದುಗೆ ಸಾಕು, ನಿಂದಿರು |
ಜನಪ ತೋರಿಸು ಸ್ವಗುಣವ ಕೌರವನ ಥಟ್ಟಿನಲಿ ||೭||

ಎಂದೊಡುಬ್ಬರಿಸಿದನು ತಾ ಕಲಿ |
ಯೆಂದೆ ಬಗೆದನು ವಿಶಾಸೆಯನು ಬೆರ |
ಳಿಂದ ತಿದ್ದುತ ಮುಗುಳುನಗೆ ಹರುಷದಲಿ ವೈಮರೆದು ||
ಸಂದಣಿಸೆ ರೋಮಾಳಿ ಕಲಿಬಲ |
ದಿಂದುಸುಬಿಯುರ ನೋಡಿದನು ನಲ |
ವಿಂದ ಸುಡಿದನು ತನ್ನ ಪೌರುಷತನದ ಪರಿಣತಿಯ ||೮||

ಅಹುದಹುದು ತಪ್ಪೇನು ಜೂಜಿನ |
ಕುಹಕದಲಿ ಪಾಂಡವರ ಸೋಲಿಸಿ |
ಮಹಿಯ ಕೊಂಡಂತೆನ್ನ ಕೆಣಕಿದನೇ ಸುಯೋಧನನು ||
ಸಹಸದಿಂದವೆ ತುರುವ ಮರಳಿಚಿ |
ತಹೆನು ಬಳಿಕಾ ಕೌರವನ ನಿ |
ರ್ವಹಿಸಲೀವೆನೆ ಸೂರೆಗೊಂಬೆನು ಹಸ್ತಿನಾಪುರವ ||೯||

ಆರೊಡನೆ ಕಾದುವೆನು ಕೆಲಬರು |
ಹಾರುವರು ಕೆಲರಂತಕನ ನೆರೆ |
ಯೂರವರು ಕೆಲರಥಮಕುಲದಲಿ ಸಂದು ಬಂದವರು ||
ವೀರರೆಂಬವರಿವರು ಮೋಣಿ |
ನ್ನಾರ ಹೆಸರುಂಟವರೊಳೆಂದು ಕು |
ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ ||೧೦||

ಬಲವ ಮುರಿವೆನು ಹಸ್ತಿನಾಪುರ |
ದೊಳಗೆ ಪ್ರಾಣಾಂತರವನಿಕ್ಕಿಸಿ |
ಕಲಕುವೆನು ಕೌರವನ ಸೇನೆಯ ಮೇಲೆ ನಿಟಿವಮಾಡಿ ||
ಗೆಲವ ತಹೆನೆನುತುತ್ತರನು ಕೋ |
ಮಲೆಯುರಿದಿರಲಿ ಬಾಯ್ಗೆ ಬಂದುದ |
ಗಳಹುತಿದ್ದನು ಬೇಕು ಬೇಡೆಂಬವರ ನಾ ಕಾಣೆ ||೧೧||

ಅರಿಯೆನೇ ಗಾಂಗೇಯನನು ತಾ |
ನರಿಯದವನೇ ದ್ರೋಣ ಕುಲದಲಿ |
ಕೊರತೆಯೆನಿಸುವ ಕರ್ಣನೆಂಬವನೆನಗೆ ಸರಿಬಹನೇ ||
ಮೆರೆವ ಬಯಲಾಡಂಬರದಿ ತುರು |
ಸೆರೆಯ ಹಿಡಿದರೆ ತಮ್ಮ ಹೆಂಡಿರ |
ಸೆರೆಯ ತಾರದೆ ಮಾಣೆನೇಂದುತ್ತರನು ಗಜರಿದನು ||೧೨||

ನುಡಿದು ಫಲವೇನೆನ್ನ ಸಾರಥಿ |
ಮಡಿದ ನೆನ್ನಿನ ಬವರದಲಿ ನಾ |
ಮುಡುಹನಾದೆನು ಶಿವಶಿವಾ ಇಂದೆನ್ನ ಕೈಗುಣಕೆ ||
ಗಡಣಿಸುವ ಸಾರಥಿಯನೊಬ್ಬನ |
ಪಡೆದೆನಾದೊಡೆ ಕೌರವೇಂದ್ರನ |
ಪಡೆಗೆ ಹಬ್ಬವ ಮಾಡುವೆನು ತೋರುವೆನು ಕೈಗುಣವ ||೧೩||

ಸಾರಥಿಯ ಶಿವ ಕೊಟ್ಟನಾದೊಡೆ |
ಮಾರಿಗುಬ್ಬಸವಾಗದೇ ಜವ |
ನೂರು ತುಂಬದೆ ಹಬ್ಬನಾಗದೆ ರಣಪಿಶಾಚರಿಗೆ ||
ದೋರೆಗರುಳಲಿ ಶಾಕಿನಿಯರೊಡ |
ಲಾರೆ ಹಿಗ್ಗದೆ ದೊಳ್ಳು ನೂಕದೆ |
ಭೂರಿ ಬೇತಾಳರಿಗೆ ಹೋಹುದೆ ಬರಿದೆ ರಣವೆಂದ ||೧೪||

ಕೇಳಿದನು ಕಲಿಪಾರ್ಥನಾತನ |
ಬಾಲ ಭಾಷೆಗಳೆಲ್ಲವನು ಪಾಂ |
ಚಾಲಿಗೆಕ್ಕಟಗರೆದು ನುಡಿದನು ರಾಜಕಾರಿಯವ ||
ಕಾಲ ತುಂಬಿತು ನಮ್ಮ ರಾಜ್ಯದ |
ಮೇಲೆ ನಿಲ್ಲಲು ಬೇಕು ಕೌರವ |
ರಾಳು ನಮಗೋಸುಗವೆ ಬಂದುದು ಕಾಂತೆ ಕೇಳೆಂದ ||೧೫||

ನರನ ಸಾರಥಿಯೆಂದು ನೀನು |
ತ್ತರೆಗೆ ಸೂಚಿಸು ತನ್ನ ನೀಗಳೆ |
ಕರಸೆನಲು ಕೈಕೊಂಡು ದುರುಪದಿ ಬಂದಳೊಲವಿನಲಿ |
ತರುಣಿ ಕೇಳರ್ಜುನನ ಸಾರಥಿ |
ವರಬೃಹನ್ನಳೆ ಖಾಂಡವಾಗ್ನಿಯ |
ಹೊರೆದ ಗಡ ತಾನೆಂದು ಸತಿಯುತ್ತರೆಗೆ ಹೇಳಿದಳು ||೧೬||

ಕೇಳಿ ಹರುಷಿತೆಯಾದಳುತ್ತರೆ |
ಯೋಲಗಕೆ ಬಂದಣ್ಣನಂಘ್ರಿಗೆ |
ಲೋಲಲೋಚನೆಯೆರಗಿ ಕೈಮುಗಿದೆಂದಳೀಹದನ ||
ಕೇಳಿದೆನು ಸಾರಥಿಯ ನೆಲೆಯನು |
ಕಾಳಗಕೆ ನಡೆಯಣ್ಣದೇವ, ನೃ |
ಪಾಲಕರ ಜಯಿಸೆನಲು ನಗುತುತ್ತರನು ಬೆಸಗೊಂಡ ||೧೭||

ತಂಗಿ ಹೇಳಾ ತಾಯೆ, ನಿನಗೀ |
ಸಂಗತಿಯನಾರೆಂದರಾರವ |
ನಂಗವಣೆಯುಳ್ಳವನೆ ಸಾರಥಿತನದ ಗೆಯ್ಮೆಯಲಿ ||
ಮಂಗಳವಲಾ ತನಗೆ ರಣದೊಳ |
ಭಂಗನಹೆ ನಿನ್ನಾಣೆ ತನ್ನಯ |
ತುಂಗವಿಕ್ರಮತನವನುಳುಹಿದೆ ಹೇಳು ಹೇಳೆಂದ ||೧೮||

ಎಂದಳೀ ಸೈರಂಧ್ರಿ ಸುರಪನ |
ನಂದನವ ಸುಡುವಂದು ಪಾರ್ಥನ |
ಮುಂದೆ ಸಾರಥಿಯಾದ ಗಡ ನಾವರಿಯೆವೀಹದನ ||
ಹಿಂದುಗಳೆಯದೆ ಕರಸು ನಮ್ಮ ಬೃ |
ಹಂದಳೆಯನೆನೆ ನಗುತ ಲೇಸಾ |
ಯ್ತೆಂದು ಕದನೋತ್ಸಾಹದಲಿ ಸೈರಂಧ್ರಿಗಿಂತೆಂದ ||೧೯||

ಸಾರಥಿಯ ಕೊಟ್ಟೆನ್ನನುಳುಹಿದೆ |
ವಾರಿಜಾನನೆ ಲೇಸುಮಾಡಿದೆ |
ಕೌರವನ ತನಿಗರುಳನುಗಿವೆನು ತಡವ ಮಾಡದೆಯೇ ||
ನಾರಿ ನೀನೇ ಹೋಗಿ ಪಾರ್ಥನ |
ಸಾರಥಿಯ ತಾ ಎನಲು, ನಮ್ಮನು |
ವೀರ ಬಗೆಯನು ನಿಮ್ಮ ತಂಗಿಯ ಕಳುಹಿ ಕರಸೆನಲು ||೨೦||

ವರನಿರಾಜಿಯ ನಿರಿಯ ರಭಸದ |
ಚರಣದಂದುಗೆ ದನಿಯ ಗಮನದ |
ಭರದಿ ಕಿರು ಬೆಮರಿಡುತ ನಡೆತರುತಿರ್ದಳಿಂದುಮುಖಿ ||
ಬರಲು ಕಂಡನು ಪಾರ್ಥನೇನಃ |
ತ್ವರೆ ಕುಮಾರಿ, ಕಠೋರ ಗತಿಯಲಿ |
ಬರವು ಭಾರಿಯ ಕಾರಿಯುವ ಸೂಚಿಸುತಲಿದೆಯೆನಲು ||೨೧||

ನೆರೆದು ಬಂದರು ಹಸ್ತಿನಾಪುರ |
ದರಸುಗಳು ಹೊಲನೊಳಗೆ ಶತಸಾ |
ವಿರದ ತುರುಗಳ ಹಿಡಿದರಳಿದುದು ಗೋಪಪಡೆ ಕಾದಿ ||
ಮುರಳಿಚುವೊಡೆಮ್ಮಣ್ಣ ದೇವನ |
ಧುರಕೆ ಸಾರಥಿಯಿಲ್ಲ ನೀವಾ |
ನರನ ಸಾರಥಿಯೆಂದು ಕೇಳಿದೆವೆಂದಳಿಂದುಮುಖಿ ||೨೨||

ಇನ್ನು ನೀವೇ ಬಲ್ಲಿರೆನೆ ನಡೆ |
ನಿನ್ನ ಮಾತನು ಮೀರಬಲ್ಲೆ ನೆ |
ಮುನ್ನ ಸಾರಥಿಯಹೆನು ನೋಡುವೆನೆನುತ ವಹಿಲದಲಿ ||
ಬೆನ್ನಲಬಲೆಯುಸ್ಯೆದಲಾ ಸಂ |
ಪನ್ನಬಲಸೋಲಗಕೆ ಬರೆ ಹ |
ಸೋನ್ನತಿಯಲುತ್ತರಕುಮಾರಕ ಕರೆದು ಮನ್ನಿಸಿದ ||೨೩||

ಎಲೆ ಬೃಹಂದಳೆ ತೆತ್ತುದೆನಗ |
ಗ್ಗಳೆಯರೊಳು ವಿಗ್ರಹವು ಸಾರಥಿ |
ಯಳಿದನೆನ್ನವ ನೀನು ಸಾರಥಿಯಾಗಿ ಸಮರದಲಿ ||
ಉಳುಹಬೇಹುದು ನೀ ಸಮರ್ಥನು |
ಫಲುಗುಣನ ಸಾರಥಿಯೆಲೈ ನೀ |
ನೊಲಿದು ಮೆಚ್ಚಲು ಕಾದಿ ತೋರುವೆನಹಿತಸೇನೆಯಲಿ ||೨೪||

ಭರತವಿದ್ಯಾವಿಷಯದಲ್ಲಿಯ |
ಪರಿಚಯವು ನಮಗಲ್ಲದೀ ಸಂ |
ಗರದ ಸಾರಥಿತನವ ಮರೆದೆವು ಹಲವುಕಾಲದಲಿ ||
ಅರಿಭಟರು ಭೀಷ್ಮಾದಿಗಳು ನಿಲಿ |
ಲರಿದು ಸಾರಥಿತನದ ಕೈಮನ |
ಬರಡರಿಗೆ ಕೈಕೊಂಬುದೇ ರಣ ಸೂರೆಯಲ್ಲೆಂದ ||೨೫||

ಆನಿರಲು ಭೀಷ್ಮಾದಿಗಳು ನಿನ |
ಗೇನಮಾಡಲು ಬಲ್ಲರಳುಕದೆ |
ನೀನು ಸಾರಥಿಯಾಗು ನಿಮಿಷಕೆ ಗೆಲುವೆನನಿಬರನು ||
ತಾನದಾರೆಂದರಿಯೆಲಾ ಗುರು |
ಸೂನುಕರ್ಣದ್ರೋಣರೆಂಬವ |
ರಾನರಿಯದವರಲ್ಲ ಸಾರಥಿಯಾಗು ಸಾಕೆಂದ ||೨೬||

ಮಂಗಳಾರತಿಯೆತ್ತಿದರು ಸಿಖಿ |
ಳಾಂಗನೆಯರುತ್ತರಗೆ ನಿಜಸ |
ರ್ವಾಂಗ ಶೃಂಗಾರದಲಿ ಹೊಳೆಹೊಳೆಯುತ್ತ ರಥವೇರಿ ||
ಹೊಂಗೆಲಸದೊಳುಕವಚವನು ಪಾ |
ರ್ಥಂಗೆ ಕೊಟ್ಟನು ಜೋಡುಸೀಸಕ |
ವಂಗದೊಳಗಳವಡಿಸಿ ರಾಜಕುಮಾರನನುವಾದ ||೨೭||

ನರನು ತಲೆಕೆಳಗಾಗಿ ಕವಚವ |
ಧರಿಸುತಿರೆ ಕೈಹೊಯ್ದು ಘೊಳ್ಳೆಂ |
ದರಸಿಯರು ನಗೆ ನಾಚಿದಂತಿರೆ ಪಾರ್ಥ ತಲೆವಾಗಿ ||
ತಿರುಗಿ ಮೇಲ್ಮೊಗವಾಗಿ ತೊಡಲು |
ತ್ತರೆ ಬಳಿಕ ನಸುನಗಲು ಸಾರಥಿ |
ಯರಿಯ ತಪ್ಪೇನೆನುತಲುತ್ತರ ತಾನೆ ತೊಡಿಸಿದನು ||೨೮||

ಕವಚವನು ತೊಡಲರಿಯದವ ನಾ |
ಹವಕೆ ಸಾರಥಿತನವ ಮಾಡುವ |
ಹವಣು ತಾನೆಂತೆನುತ ನಕ್ಕರು ಸಿಖಿಳ ರಾಣಿಯರು ||
ಒವರವನು ನಮ್ಮಣ್ಣ ಗೆಲಿದಪ |
ನವರ ಮಣಿಪರಿಧಾನವಾಭರ |
ಣವನು ಸಾರಥಿ, ಕೊಂಡು ಬಾ ಎಂದಳು ಸರೋಜಮುಖಿ ||೨೯||

ನಸುನಗುತ ಕೈಕೊಂಡನರ್ಜುನ |
ನೆಸಗಿದನು ರಥವನು ಸವಿಾರನ |
ಮಿಸುಕಲೀಯದೆ ಮಿಕ್ಕು ನಡೆದುವು ವಿಗಡವಾಜಿಗಳು ||
ಹೊಸಪರಿಯ ಸಾರಥಿಯಲಾ ನಮ |
ಗಸದಳವು ಸಂಗಾತ ಬರಲೆಂ |
ದುಸಿರದುಳಿದುದು ಹಿಂದೆ ಮತ್ಸ್ಯನ ಚಾತುರಂಗಬಲ ||೩೦||

ಎಲೆ ಪರೀಕ್ಷಿತತನಯ, ಕೇಳಾ |
ಫಲುಗುಣನು ವೇಗದಲಿ ರಥವನು |
ಕೊಳುಗುಳಕೆ ತರೆ ಕಂಡನುತ್ತರ ಮುಂದೆ ದೂರದಲಿ ||
ತಳಿತಕುಂತದ ಬಾಯಿಧಾರೆಯ |
ಹೊಳಹುಗಳ ಹೊದರೆದ್ದ ಸಿಂಧದ |
ಸೆಳೆಯ ಸೀಗುರಿಗಳ ಸುರೌದ್ರದ ಸಕಲಮೋಹರವ ||೩೧||

ಕರಿಘಟಾವಳಿಯೊಡ್ಡುಗಲ್ಲಿನ |
ತುರಗನಿಕರದ ತೆರೆಯ ತೇರಿನ |
ಹೊರಳಿಗಳ ಸುಳಿಯಾತಪತ್ರದ ಬಹುಳ ಬುದ್ಬುದದ ||
ನರಸಿಕಾಯುವ ಜಲಚರೌಘದ |
ತರದ ವಾದ್ಯಧ್ವನಿಯ ರವದು |
ಬ್ಬರದೊಳಿದ್ದುದು ಬಹಳ ಜಲನಿಧಿಯಂತೆ ಕುರುಸೇನೆ ||೩೨||

ಜಡಿವ ಖಡ್ಗದ ಕಿಡಿಯ ಸೇನೆಯ |
ಕಡುಹುಗಳ ಕೇಸುರಿಯ ಬಲದು |
ಗ್ಗಡದ ರಭಸದ ರೌದ್ರರವ ಛಟಛಟಿತ ನಿಸ್ವನದ ||
ಇಡಿದ ಧೂಳಿಯ ಧೂಮರಾಜಿಯ |
ಪಡೆ ವಿರಾಟನ ಮಗನ ಕಂಗಳ |
ಗೊಡನೊಡನೆ ದಾವಾಗ್ನಿಯಂತಿರೆ ತೋರಿತಿದಿರಿನಲಿ ||೩೩||

ಕಡೆಗೆ ಹಾಯ್ದುವು ಕಂಗಳೀಬಲ |
ಗಡಲ ಮನವೀಸಾಡಲಾರದು |
ವೊಡಲುವಿಡಿದಿರಲೇನ ಕಾಣಲು ಬಾರದದ್ಭುತವ ||
ಪೊಡವಿಯಿಾಂದುದೊ ಮೋಹರವನಿದ |
ರೊಡನೆ ಕಾದುವ ವೀರನಾತನೆ |
ನ್ನುಡನು ಶಿವಶಿವ ಕಾದಿ ಗೆಲಿದೆವು ಬಲಕೆ ನಮೊ ಎಂದ ||೩೪||

ಹಸಿದ ಮಾರಿಯ ಕಟಕದಲಿ ಕುರಿ |
ಸುಸುಳಿ ಬದುಕುವುದೇ ಬೃಹಂದಳೆ|
ಎಸಗದಿರು ತೇಜಿಗಳ ತಡೆ ಚಮ್ಮಟಿಕೆಯನು ಬಿಸುಡು ||
ಮಿಸುಕಬಹುದೇ ಪ್ರಳಯಕಾಲನ |
ಮುಸುಕನುಗಿವವನಾರು ಕೌರವ |
ನಸಮಬಲಸ್ಯೆ ರಥವ ಮರಳಿಚು ಪುರಕೆ ನಡೆಯೆಂದ ||೩೫||

ಸಾರೆ ಬರಬರಲವನ ತನು ಮಿಗೆ |
ಭಾರಿಸಿತು ಮೈಬಿಗಿದ ರೋಮವಿ |
ಕಾರ ಮಿಗೆ ಕಾಹೇರಿತವಯವವಡಿಗಡಿಗೆ ನಡುಗಿ ||
ಭೂರಿ ಭಯ ತಾಪದಲಿ ತಾಳಿಗೆ |
ನೀರುದೆಗೆದುದು ತುಟಿಯೊಣಗಿ ಸುಕು |
ಮಾರ ಕಣ್ಣವೆ ಸೀಯೆ ಕೈಯಲಿ ಮುಚ್ಚಿದನು ಮೊಗವ ||೩೬||

ಏಕೆ ಸಾರಥಿ, ರಥವ ಮುಂದಕೆ |
ನೂಕಿ ಗಂಟಲ ಕೊಯ್ವೆ ಸುಡುಸುಡು |
ಕಾಕಸ್ಯೆ ಕಣ್ಣೊಡೆಯುವೇ ಕಾಣಾ ಮಹಾಬಲವಾ ||
ನಾಕಸಿಳಯರಿಗರಿದು ನಿನಗೆ ವಿ |
ವೇಕವೆಳ್ಳನಿತಿಲ್ಲಲಾ ನಿಲು |
ಸಾಕು ವಾಘೆಯ ಮರಳಿ ಸೆಳೆ ತೇಜಿಗಳ ತಿರುಹೆಂದ ||೩೭||

ನುಡಿಯ ಕೇಳದವೋಲು ಹತ್ತೆಂ |
ಟಡಿಯನರ್ಜುನ ರಥವ ಹರಿಸಲು |
ಹಿಡಿದ ಬಿಲ್ಲಂಬುಗಳು ಬಿದ್ದವು ಕೈಯ ನರ ತೆಗೆದು ||
ಹಿಡಿ ಹಯವ ನಿರಿಗಾರ ಸಾರಥಿ |
ನುಡಿವವರು ನಾವ್ ಹಗೆಗಳೇ ನಿನ |
ಗೊಡೆಯರಲ್ಲಾ ಸ್ವಾಮಿದ್ರೋಹಿಕೆ ಲೇಸು ಲೇಸೆಂದ ||೩೮||

ಎಂದೊಡರ್ಜುನ ನಗುತ ತೇರನು |
ಮುಂದೆ ದುವ್ವಾಳಿಸಲು ಉತ್ತರ |
ಕೊಂದನೀ ಸಾರಥಿಯೆನುತ ಸಂವರಿಸಿ ಮುಂಜೆರಗ ||
ನಿಂದು ಮೆಲ್ಲನೆ ರಥದ ಹಿಂದಕೆ |
ಬಂದು ಧುಮ್ಮಿಕ್ಕಿದನು ಬದುಕಿದೆ |
ವೆಂದು ನಿಟ್ಟೋಟದಲಿ ಹರಿದನು ಬಿಟ್ಟ ಮಂಡೆಯಲಿ ||೩೯||

ನೋಡಿದನು ಕಲಿಪಾರ್ಥನೀ |
ಕೇಡಾಡಿ ಕೆದರಿದ ಕೇಶದಲಿ ಕೆ |
ಟ್ಟೋಡುತಿರಲೆಲೆಪಾಪಿ ಹಾಯ್ದನು ಹಿಡಿಯಬೇಕೆನುತ ||
ಕೂಡೆ ಸೂಠಿಯೊಳಟ್ಟಲಿಳಿಯ |
ಲ್ಲಾಡಲಹಿಪತಿ ಕುಸಿಯಲಿತ್ತಲು |
ನೋಡಿ ಕೌರವಸೇನೆ ಕೆಡೆದುದು ನಗೆಯ ಕಡಲೊಳಗೆ ||೪೦||

ಎಲೆಲೆ ಕಾದಲು ಬಂದ ವೀರನ |
ಬಲುಹ ನೋಡಾ ಶಿವ ಶಿವಾ ಜೆಂ |
ಬಳಿಯಲಟ್ಟುವ ವೀರನಾವನೊ ಸುಭಟನವನಹನು ||
ತಿಳಿಯಲರಿದಿವನಾವನೋ ವೆ |
ಗ್ಗಳೆಯನಹನಾಕಾರದಲಿ ನೆರೆ |
ಫಲುಗುಣನ ಹೋಲುವನೆನುತ ಗಜಬಜಿಸಿತರಿಸೇನೆ ||೪೧||

ಇಟ್ಟಣಿಸಿ ನರ ನೂರುಹೆಜ್ಜೆಯೊ |
ಳಟ್ಟಿ ಹಿಡಿದನಿದೇನಮಾಡಿದೆ |
ಹುಟ್ಟಿದೆಯೊ ದ್ವಿಜರಲ್ಲಿ ಕ್ಷತ್ರಿಯ ಜಾತನೋ ಮೇಣು ||
ದಿಟ್ಟತನ ಮಿಗೆ ಹೆಂಗಳಿದಿರಲಿ |
ಹೊಟ್ಟುಗುಟ್ಟಿದೆ ಹಗೆಗಳಿದಿರಲಿ |
ಬಿಟ್ಟುಪೋಡಿ ದುರಾತ್ಮ ಮುರಿದೆ ವಿರಾಟನನ್ವಯವ ||೪೨||

ಹಲುಗಿರಿದು ಬಾಯೊಳಗೆ ಬೆರಳ್ಗಳ |
ನಿಳುಹಿ ತಲೆವಾಗಿದನು ಸಾರಥಿ, |
ಕಳುಹಿ ಕಳೆಯ್ಯೈ ನಿನ್ನ ಬಸಿರಲಿ ಮತ್ತೆ ಬಂದವನು ||
ಕೊಳುಗುಳದೊಳೀಯೊಡ್ಡ ಮುರಿವ |
ಗ್ಗಳಿಕೆಯುಂಟೀ ರಿಪುಗಳಿಂದಲೆ |
ಕೊಲಿಸದಿರು ನೀ ಕುತ್ತಿ ಕೆಡಹು ಕಠಾರಿಯಿದೆಯೆಂದ ||೪೩||

ಮನದೊಳೊಡಲೊಡೆವಂತೆ ನಗುತ |
ರ್ಜುನನು ಗಜರಿದನೆಲವೊ ಸಭೆಯಲಿ |
ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ ||
ಅನುವರದೊಳೇನಾಯ್ತು ರಿಪುವಾ |
ಹಿನಿಯನಿರಿಯದೆ ನಾಡ ನರಿಯವೊ |
ಲೆನಗೆ ನೀ ಹಲುಗಿರಿಯೆ ಬಿಡುವೆನೆ ಕಾದು ನಡೆಯೆಂದ ||೪೪||

ಹೇವ ಬೇಡಾ ವೀರರೀಪರಿ |
ಜೀವಗಳ್ಳರ ಪಥವ ಹಿಡಿವರೆ |
ಸಾವಿಗಂಜುವೆನೇ ನಪುಂಸಕರೆಮ್ಮ ನೋಡೆನಲು ||
ನೀವು ವೀರರು ನೆರೆ ನಪುಂಸಕ |
ರಾವು ಸಾವವರಲ್ಲ ಲೋಕದ |
ಜೀವಗಳ್ಳರಿಗಾವು ಗುರುಗಳು ಬಿಟ್ಟು ಕಳುಹೆಂದ ||೪೫||

ಹರುಕನೇ ನೀನೆಲವೊ ರಾಯರೊ |
ಳುರುವ ನೃಪ ನಿಮ್ಮಯ್ಯ ನಿನಗಿಂ |
ದಿರಿದು ಮೆರೆವವಸರವಲಾ ಜವ್ವನದ ಧರಧುರವ ||
ಸರಿಗಳೆಯುದಪಕೀರ್ತಿ ರವಿಶಶಿ |
ಮುರಿದು ಬೀಳ್ವನ್ನಬರವೆಲೆ ನರ |
ಗುರಿಯೆ, ನಡೆ ಕಾಳಗಕೆನುತ ಹಿಡಿದೆಳೆದನುತ್ತರನಾ ||೪೬||

ಕೊಳುಗುಳದೊಳೋಡಿದರೆ ಹಜ್ಜೆಗೆ ।
ಫಲ ಮಹಾಪಾತಕವು ಮುಂದಣಿ ।
ಗೊಲಿದು ಹಜ್ಜೆಯನಿಡಲು ಹಜ್ಜೆಯೊಳಶ್ವಮೇಧಫಲ ॥
ಅಳಿದನಾದೊಡೆ ದೇವಲೋಕದ ।
ಲಲನೆಯರು ತೊತ್ತಿರು ಸುರೇಂದ್ರನು ।
ನೆಲನನುಗ್ಘಡಿಸುವನು ವೀರಸ್ವರ್ಗವಹುದೆಂದ ॥೪೭॥

ಧುರದೊಳೋಡಿದ ಪಾತಕವ ಭೂ ॥
ಸುರರು ಕಳೆದಪರಶ್ವಮೇಧವ ।
ಧರಣಿಯೊಳ್ ಪ್ರತ್ಯಕ್ಷವಾಗಿಯೆ ಮಾಡಬಹುದೆಮಗೆ ॥
ಸುರರ ಸತಿಯರ ನೊಲ್ಲೆವೆಮಗೆ ।
ಮ್ಮರಮನೆಯ ರಾಣಿಯರೆ ಸಾಕೆ ।
ಮ್ಮರಸುತನವೇ ಇಂದ್ರಪದವಿಯು ಬಿಟ್ಟುಕಳುಹೆಂದ ॥೪೮॥

ಆಳೊಳೊಡ್ಡುಳ್ಳವನು ಭಾರಿಯ ।
ತೋಳುಗಳ ಹೊತ್ತವನು ಮನೆಯಲಿ ।
ಬಾಳೆಯರ ಮುಂದೊದರಿ ಭಾಷೆಯ ನುಡಿದು ಬಂದವನು ॥
ಕೋಲನಿಕ್ಕದೆ ಘಾಯಗಾಣದೆ ।
ಕಾಲ ವೇಗವ ತೋರಿದರೆ ನೀ ।
ನೋಲಗದೊಳೆಂತಕಟ ನಾಚದೆ ಕುಳ್ಳಿರುವೆಯೆಂದ ॥೪೯॥

ತೆತ್ತುಕೊಂಡಾ ನಾಚುಗೆಗೆ ನೆರೆ ।
ಕುತ್ತಿಕೊಳಬೇಕೆಂಬ ಗಾದೆಯ ।
ನಿತ್ತ ಹೊದ್ದಿಸಬೇಡ ನಾವಂಜುವೆವು ಕಾಳೆಗಕೆ ॥
ತೆತ್ತಿಗನು ನೀನಹಿತನಂದದಿ ।
ಮಿತ್ತುವಹರೇ ನಿನಗೆ ಬೇಡಿದ ।
ನಿತ್ತು ಮನ್ನಿಪೆನೆನ್ನ ಕೊಲಿಸದೆ ಬಿಟ್ಟು ಕಳುಹೆಂದ ॥೫೦॥

ವಳಿತವನು ವಾರುವವ ಮುಕ್ತಾ |
ವಳಿಯಲಂಕಾರವನು ರಥವನು |
ಲಲನೆಯರ ನಾಸೀಸಿಕೊಡುವೆನು ರಾಜಭವನದಲಿ ||
ಎಲೆ ಬೃಹಂದಳೆ ನಮ್ಮ ಜೊಪ್ಪನು |
ಸಲಹಿದಕೆ ಕೆಯ್ಯೊಡನೆ ತೋರುವೆ |
ಕಲುಮನವಲಾ ನಿನ್ನದೆಂದೊಡೆ ಪಾರ್ಥನಿಂತೆಂದ ||೫೧||

ಎಲವೊ, ಸಾರಥಿಯಾಗು ನಡೆ, ಬಿಡು |
ಗಳಹಿದೊಡೆ ಕಡೆವಾಯ ಕೊಯ್ವೆನು |
ಗೆಲುವೆನಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ ||
ಬಳಿಕ ನೀ ನಗು, ನಡೆಯೆನುತ ರಿಪು |
ಬಲಭಯಂಕರನುತ್ತರನ ಹೆಡ
ತಲೆಯ ಹದರಿನೊಳೌಕಿ ತಂದನು ರಥವನೇರಿಸಿದ ||೫೨||

(ಕುಮಾರವ್ಯಾಸ - ಮಹಾಭಾರತ)



# ೨೯. ಕರ್ಣನ ಚಿತ್ತಗ್ಲಾನಿ

ಒಲಿದವರ ಜೀವಿಸುವ ಬಗೆ ತಾಂ |
ಬಲುಹು ಮುರಮಥನಂಗೆ ಮುನಿದೊಡೆ |
ತಲೆಯ ಬರೆಹವ ತೊಡೆವನಲ್ಲದೆ ಒಟ್ಟಿಕ ಸ್ಥಿರಿಸನು ||
ನಳಿನನಾಭನು ಭಜಕರಿಗೆ ಬೆಂ |
ಬಟ್ಟಿಯ ಬಿರುದನು ಭೇದದೊಳು ಕುದು |
ಕುಲವ ಕೊಂದನು ಕೇಳು ಜನಮೇಜಯಮಹೀಪಾಲ ||೧||

ಇನತನೂಜನ ಕೂಡೆ ಮೈದುನ |
ತನದ ಸರಸವನೆಸಗಿ ರಥದೊಳು |
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದೊಳು ||
ಎನಗೆ ನಿಮ್ಮಡಿಗಳೊಳು ಸರಿಸೇ |
ವನೆಯೆ ದೇವ ಮುರಾರಿಯಂಜುವೆ |
ನೆನಲು ತೊಡೆಸೋಂಕಿನೊಳು ಸಾರಿದು ಶೌರಿಯಿಂತೆಂದ ||೨||

ಭೇದವಿಲ್ಲೆಲೆ ಕರ್ಣ ನಿಮ್ಮೊಳು |
ಯಾದವರು ಕೌರವರೊಳಗೆ ಸಂ |
ಪಾದಿಸುವೊಡನ್ವಯಕೆ ಮೊದಲೆರಡಿಲ್ಲ ನಿನ್ನಾಣೆ ||
ಮೇದಿನೀಪತಿ ನೀನು ಚಿತ್ತದೊ |
ಳೀದುದಿಲ್ಲಱಿವೆನುತೆ ದಾನವ |
ಸೂದನನು ರವಿಸುತನ ಕಿವಿಯೊಳು ಬಿತ್ತಿದನು ಭವವ ||೩||

ದಾನವಾಂತಕ ಬೆಸಸು ವಂಶವಿ |
ಹೀನನನು ನಿಮ್ಮಡಿಗಳೊಡನೆ ಸ |
ಮಾನಿಸುವರೇ ಸಾಕೆನುತೆ ತಲೆವಾಗಿ ಕೈಮುಗಿಯೆ ||
ಮಾನನಿಧಿಯೆನ್ನಾಣೆ ಬಾರೈ|
ನೀನು ನಮ್ಮೆಲ್ಲರ ಹವಣೆ ವರ |
ಭಾನುವಂಶಲಲಾಮ ನೀಂ ರಾಮಂಗೆ ಸರಿಯೆಂದ ||೪||

ಕಳೆದುಕೊಂಡನು ಪೀಳಯುವನಂ |
ಜುಳಿಯೊಳಾತಂಗಿತ್ತು ಕರ್ಣನ |
ಕೆಲಕೆ ಬರಸೆಳೆದವನ ಕರದೊಳು ಕರತಳವನಿಕ್ಕಿ ||
ಎಲೆ ದಿವಾಕರತನಯ ನಿನ್ನಯ |
ಕುಲವನಱಿಯೆಯಲಾ ಸುಯೋಧನ |
ನೊಳು ವೃಥಾ ಸೇವಕತನನೊಳಹುದುಚಿತವಲ್ಲೆಂದ ||೫||

ಲಲನೆ ತಾಂ ಪಡೆದೈದುಮಂತ್ರಂ |
ಗಳೊಳು ಮೊದಲಿಗ ನೀನು ನಿನ್ನಯ |
ಬಳಿಕ ಯುಧಿಷ್ಠಿರದೇವ ಮೂಱನೆಯಾತ ಕಲಿಭೀಮ ||
ಫಲುಗುಣನು ನಾಲ್ಕನೆಯೊಳೈದನೆ |
ಯೊಳು ನಕುಲಸಹದೇವರಾದರು |
ಬಳಿಕ ಮಾದ್ರೀದೇವಿಯಲ್ಲಿಯುದೊಂದು ಮಂತ್ರದೊಳು ||೬||

ಆದಱಿಂ ನೀಪಾಂಡವರೊಳೈವರ |
ಮೊದಲಿಗನು ನೀನಿರಲು ಧರಣಿಯ |
ಕದನವಿತ್ತಂಡಕ್ಕೆ ಕಾಮಿಂತನಲ್ಲ ಭಾವಿಸಲು ||
ಇದು ನಿದಾನವು ಕರ್ಣ ನಿನ್ನ |
ಭ್ಯುದಯುವನೆ ಬಯಸುವೆನು ನಿನ್ನಯ |
ಪದಕೆ ಕೆಡಹುವೆನೈವರನು ಬಹುದೆನ್ನ ಸಂಗಾತ ||೭||

ನಿನಗೆ ಹಸ್ತಿನಪುರದ ರಾಜ್ಯದ |
ಘನತೆಯನು ಮಾಡುವೆನು ಕೌರವ |
ಜನಸಪಾಂಡವಜನಪರೋಲೈಸುವರು ಗದ್ದುಗೆಯ ||
ನಿನಗೆ ಕಿಂಕರರೆರಡುಸಂತತಿ |
ಯೆನಿಸಲೊಲ್ಲದೆ ನೀನು ದುರ್ಯೋ |
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ||೮||

ಎಡದ ಮೆಯ್ಯೊಳು ಕೌರವೇಂದ್ರನ |
ಗಡಣ ಬಲದೊಳು ಪಾಂಡುಪುತ್ರರ |
ಗಡಣವಿದಿರೊಳು ಮಾದ್ರ ಮಾಗಧ ಯಾದವಾದಿಗಳು ||
ನಡುವೆ ನೀನೋಲಗದೊಳೊಪ್ಪುವ |
ಕಡುವಿಲಾಸವ ಬಿಸುಟು ಕುರುಪತಿ |
ನುಡಿಯೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ||೯||

ಶೌರಿಯುದೊಳದಿರಿಲ್ಲ ಕುಲದೊಳು |
ಸೂರಿಯುನ ಸುತನೊಡನೆ ಹುಟ್ಟಿದ |
ವೀರರಗ್ಗದ ಪಾಂಡುತನಯರು ನಿನ್ನ ವೈಭವಕೆ ||
ಆರು ಸರಿಯೈ ಕರ್ಣ ನಡೆ ನಡೆ |
ಧಾರಿಣೀಪತಿಯಾಗು ನೀನಿರೆ |
ವೈರವಿತ್ತಂಡಕ್ಕೆ ಬಟಿಕಿಲ್ಲೆಂದನಸುರಾರಿ ||೧೦||

ಕೊರಳ ಸೆರೆ ಹಿಗ್ಗಿದುವು ದೃಗುಜಲ |
ವುರವಣಿಸೆ ಕಡುನೊಂದನಕಟಾ !
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ ||
ಹರಿಯ ಹಗೆ ಹೊಗೆದೋಱದುರುಹದೆ |
ಬಱಿದೆ ಹೋಹುದೆ ತನ್ನ ಜನನವ |
ನಱುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ||೧೧||

ಕಾದಿ ಕೊಲುವೊಡೆ ಪಾಂಡುಸುತರು ಸ |
ಹೋದರರು ಕೊಲಲಿಲ್ಲ ಕೊಲ್ಲದೆ |
ಕಾದೆನಾದೊಡೆ ಕೌರವಂಗವನಿಯೊಳು ಹೊಗಲಿಲ್ಲ ||
ಭೇದದೊಳು ಹೊಕ್ಕಿಱಿದನೋ ಮಧು |
ಸೂದನನು ತಾನಕಟನುತೆ ಚಿಂ |
ತೋದಧಿಯೊಳದ್ದಂತೆ ಮೌನದೊಳಿರ್ದನಾಕರ್ಣ ||೧೨||

ಏನು ಹೇಟ್ಟೈ ಕರ್ಣ ಚಿತ್ತ |
ಗ್ಲಾನಿಯಾವುದು ನಿನಗೆ ಕುಂತೀ |
ಸೂನುಗಳ ಬೆಸಗೆಯ್ಸಿಕೊಳ್ವುದು ಸೇರದೇ ಮನಕೆ ||
ಹಾನಿಯಿಲ್ಲೆನ್ನಾಣೆ ನುಡಿ ದು |
ಮ್ಮಾನವೇತಕೆ ಮರಳುತನ ಜೀ |
ಡಾನು ನಿನ್ನ ಪದಕೆಯ ಬಯಸುವನಲ್ಲ ಕೇಳೆಂದ ||೧೩||

ಮರುಳುಮಾಧವ ಸಕಲರಾಜ್ಯದ |
ಸಿರಿಗೆ ಸೋಲುವನಲ್ಲ ಕೌಂತೇ |
ಯರು ಸುಯೋಧನರಸಗೆ ಬೆಸಗೈವಲ್ಲಿ ಮನವಿಲ್ಲ ||
ಹೊರೆದ ದಾತಾರಂಗೆ ರಿಪುಗಳ |
ಶಿರವನರಿದೊಪ್ಪಿಸುವೆನೆಂಬೀ |
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ||೧೪||

ಒಡನೆ ಹುಟ್ಟಿದರೆಂಬ ಕಥನವ |
ನೆಡೆಗುಡದೆ ಬಣ್ಣಿಸಿದೆ ಪಾಂಡವ |
ರಡಗು ಬಾಣಕೆ ಬಲಿಯೆನಿಪ್ಪೀಫಲವ ಮಾಣಿಸಿದೆ ||
ನುಡಿದು ಫಲವೇನಿನ್ನು ಕೌರವ |
ರೊಡೆಯನಾದಂತಹೆನು ಬಾರೆನು |
ಪೊಡವಿಯೊಳು ನೀಂ ಹರಹಿಕೊಳು ನಿನ್ನವರ ನಿಲಿಸೆಂದ ||೧೫||

ಹಲವುಮಾತೇನಖಿಳಜನವೆ |
ನ್ನುೞಿವ ಸೊಗಸದು ಕೌರವೇಶ್ವರ |
ನೊಲವು ತಪ್ಪಿಸೆ ಭುವನದೊಳಗೆನಗಾಪ್ತಜನವಿಲ್ಲ ||
ಸಲಹಿದನು ಮನ್ನಣೆಯೊಳೆನಗ |
ಗ್ಗಳಿಕೆಯಲ್ಲದೆ ಹೀನವೃತ್ತಿಯ |
ಬಳಸಿ ನಡಸನು ಕೌರವೇಂದ್ರನನೆಂತು ಮಱೆದಿಹೆನು ||೧೬||

ನೋಡಿ ದಣಿಯನು ನಿಚ್ಚವುಚಿತವ |
ಮಾಡಿ ದಣಿಯನು ಬಿರುದ ಹೊಗೞಿಸಿ |
ಹಾಡಿ ದಣಿಯನು ಮಾನನಿಧಿಯನದೆಂತು ಮಱೆದಪೆನು ||
ಕಾಡಲಾಗದು ಕೃಷ್ಣ ಖಾತಿಯ |
ಮಾಡಲಾಗದು ಒಂದೆನಾದೊಡೆ |
ರೂಢಿ ಮೆಚ್ಚದು ಕೌರವನ ಹಗೆ ಹರಿಬವೆನಗೆಂದ ||೧೭||

ವೀರ ಕೌರವರಾಯನೇ ದಾ|
ತಾರನಾತನ ಹಗೆಯೆ ಹಗೆ ಕೈ |
ವಾರವೇ ಕೈವಾರವಾದಂತಹೆನು ಕುರುನೃಪತಿ ||
ಶೌರಿ ಕೇಳೈ ನಾಳೆ ಸಮರದ |
ಭಾರದೊಳು ತೋಱುವೆನು ನಿಜಭುಜ |
ಶೌರಿಯುದ ಸಂಪನ್ನತೆಯನಾ ಪಾಂಡುತನಯರೊಳು ||೧೮||

ಅರುಣಜಲದಾಜ್ಯದೊಳು ಬಂಬಲು |
ಗರುಳಚರುವಿನೊಳೆಲುವಿನೊಟ್ಟಿಲ |
ಬೆರಳ ಸಮಿಧೆಯೊಳಡಗಿನಖಿಳಾಹುತಿಯ ರಚನೆಯೊಳು ||
ನರಕಪಾಲದ ಪಾತ್ರೆಯೊಳು ನಿಡು |
ದೆರಳೆಗಳ ಕೇಶದ ಸುದರ್ಭಾಂ |
ಕುರದೊಳಾಹವಯಜ್ಞದೀಕ್ಷಿತನಹೆನು ತಾನೆಂದ ||೧೯||

ಮಾರಿಗೌತಣವಾಯ್ತು ನಾಳಿನ |
ಭಾರತವು ಬಹುಜೀವಹರವೀ |
ಕೌರವನ ರುಣ ಹಿಂಗೆ ರಣದೊಳು ಸುಭಟಕೋಟಿಯನು ||
ತೀಱಿಸಿಯೆ ಪತಿಯುವಸರಕ್ಕೆ ಶ |
ರೀರವನು ನೂಕುವೆನು ನಿನ್ನಯ |
ಧೀರರೈವರ ನೋಯಿಸೆನು ರಾಜೀವಸಖನಾಣೆ ||೨೦||

ಎನಲು ಕರ್ಣನ ದೃಢವ ಕಂಡನು |
ಮನದೊಳುತ್ಸಾಹಿಸಿದನಾದಡೆ |
ಯನುಜರೈವರ ಹದನು ನಿನ್ನದು ಬಲುಹ ಮಾಡಿದಡೆ ||
ಮನಕೆ ಖತಿಯುಹುದಱುಹದಿರ್ದಡೆ |
ತನಗೆ ಗುಣವಲ್ಲೆಂಬ ಕಾರಣ |
ವಿನಿತನಾನಱುಹಿದೆನು ನೀಂ ಸುಖಿಯಾಗು ಹೋಗೆಂದ ||೨೧||

ಬಂದಡೊಳ್ಳಿತು ಬಾರದಿರ್ದಡೆ ।
ಕಂದ ಕೇಳ್ಳೈ ಮಧುರವಚನದ ।
ಮಂದಮತಿಯನು ತಿಳುಹಿ ತಮ್ಮಂದಿರಿಗೆ ರಾಜ್ಯವನು ॥
ಇಂದು ಕೊಡಿಸುವುದುಚಿತ ಸಂಪ್ರತಿ ।
ಗಿಂದು ಸೇರಿಸು ನಿನ್ನ ಮಾತನು ।
ಹಿಂದುಗಳೆಯನು ಕೌರವೇಶ್ವರನೆಂದನಸುರಾರಿ ॥೨೨॥

ಮಸೆದುದಿತ್ತಂಡಕ್ಕೆ ಮತ್ಸರ ।
ವಸಮಸಂಗರರೀಗ ಸಂಧಿಯ ।
ನುಸಿರಿದಡೆ ಮನಗಾಣನೇ ಕೌರವಮಹೀಶ್ವರನು ॥
ವಿಷಮನಹ ಕಟ್ಟಾಳು ಮಂತ್ರವ
ನೆಸಗಲಾಗದು ತನ್ನ ಬೀರಕೆ
ಮಸುಳಹುದು ಮುರವೈರಿ ಸಂಧಿಯನಱಿಯೆನಾನೆಂದ ॥೨೩॥

ಕಳುಹಬೇಹುದು ದೇವ ದಿನಪತಿ ।
ಯಿಳಿದನಪರಾಂಬುಧಿಗೆ ಸಂಪ್ರತಿ ।
ಯಳಿದ ಹೊತ್ತಿಂದೀಗ ನೆಟ್ಟನೆ ನೀವು ಪಾಂಡವರು ॥
ಹುಲುಸರವಿ ಹಾವಹುದು ಹುತ್ತಿನ ।
ಬಳಿಯೊಳಿರಲಜ್ಞರಿಗೆ ಹಿಸುಣರ ।
ಬಳಕೆ ಹೊಗುವುದು ಕಳುಹಬೇಕೆಂದಂಘ್ರಿಗೆಱಗಿದನು ॥೨೪॥

ಬೀಳುಕೊಂಡನು ಮನೆಗೆ ಬಂದು ವಿ ।
ಶಾಲಮತಿ ಚಿಂತಿಸಿದನಾ ಸಿರಿ ।
ಲೋಲ ಮಾಡಿದ ಮಂತ್ರ ಮನದೊಳು ನಟು ಬೇರ್ವರಿಯೆ ॥
ಕಾಳುಮಾಡಿದನಕಟ ಕುರುಪತಿ ।
ಬಾಲಿಲಱಿಯದೆ ಕೆಟ್ಟನೀಗೋ ।
ಪಾಲ ಬಱಿದೇ ಬಿಡನು ಜೀವವ ಕೊಳ್ಳದಿರನೆಂದ ॥೨೫॥

(ಕುಮಾರವ್ಯಾಸ - ಮಹಾಭಾರತ)



## ೩೦. ನಳನ ವಿಕಾರರೂಪ

ಕೇಳು ಕುಂತೀತನಯ ನಿಷಧನೃ ।
ಪಾಲನಿತ್ತಲು ಮಱೆದು ಮಲಗಿದ ।
ಬಾಲೆಯನು ಬಿಟ್ಟಡವಿಯಲಿ ಪೋಱಮಟ್ಟನಾಶ್ರಯವ ॥
ಕಾಲವಾತನ ಕೀಳುಮಾಡಿತು ।
ಶೂಲಪಾಣಿಯೆ ಬಲ್ಲ ನಳಭೂ ।
ಪಾಲಕನ ವಿಧಿಯೇನನೆಂಬೆನು ಬಂದನಡವಿಯಲಿ ॥೧॥

ವನಿತೆ ಮಲಗಿಹಳೋ ಅಧೈರ್ಯದಿ ।
ನೆನೆವಳೋ ದೈವವನು ಮನದಲಿ ।
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ ॥
ಕನಲಿ ವಿಧಿಯನು ಬಯ್ವಳೋ ಕಂ ।
ಬನಿಯ ಸುರಿವಳೊ ಶೋಕದಲಿ ನಿಜ ।
ತನುವ ಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದು ॥೨॥

ಸುತರ ಪರರೆಡೆಗಿತ್ತು ನಂಬಿದ ।
ಸತಿಯು ತಂದಡವಿಯಲಿ ಮಲಗಿಸಿ ।
ಮತಿವಿಕಳನಾದೆನು ಪುರಾಕೃತಕರ್ಮಫಲವೈಸೆ ॥
ಕ್ಷಿತಿಯೊಳಾರುಂಟೆನ್ನವೊಲು ನಿಜ ।
ಸತಿಗೆ ತಪ್ಪಿದ ಬಾಹಿರರು ಎಂ ।
ದತಿಶಯದ ಶೋಕದಲಿ ನಡೆದನು ಶಿವ ಶಿವಾಯೆನುತ ॥೩॥

ಲೋಕದೊಳಗಗ್ಗಳಿಯ ಮಹಿಪರ ।
ನೇಕರವರೊಳಗಾರನೊಲ್ಲದೆ ।
ನೂಕಿ ತನ್ನನೆ ಒಲಿದು ಕೈಕೊಂಡಳು ಸರೋಜಮುಖಿ ॥

ಆಕೆಯುಗಲಿದ ಪಾತಕನು ತಾ | ೧೮.೧.
ನೇಕೆ ಧರೆಯೊಳು ಶಿವಶಿವಾಯೆಂ |
ದಾಕಮಲಲೋಚನೆಗೆ ಮಱುಗಿದನರಸ ಕೇಳೆಂದ ||೪||

ಈಪರಿಯೊಳತಿಶೋಕದಿಂದ ಪ್ರ |
ಲಾಪಿಸುತಲಾನೃಪತಿ ಹೆಚ್ಚಿದ |
ತಾಪದಲಿ ಕಡುನೊಂದು ಬಳಲಿದ ತನ್ನ ಮನದೊಳಗೆ ||
ಶ್ರೀಪತಿಯ ನೆನೆಯುತ್ತ ಹೃದಯದ |
ತಾಪದೊಳು ಬರುತಿರಲು ಮುಂದೆ ಸ |
ವಿಾಪದೊಳು ಹುತವಹನ ಮಹಿಮೆಯ ಕಂಡನವನೀಶ ||೫||

ಬಿದಿರಮೆಳೆ ಧಗಧಗಿಸೆ ಘನಹೆ |
ಬ್ಬಿದಿರು ಛಟಛಟಯೆನಲುವುರಿಯೊಳು |
ಕದಳಿಗಳು ಸಿಮಿಸಿಮಿಸೆ ತರುಗಳನುರುಹಿ ಮೆಳೆಗಳೊಳು ||
ಗದಗದಿಸೆ ಗುಹೆಗಳಲಿ ಮೃಗತತಿ |
ಬೆದಱಿ ಹಾಯ್ದುವು ಪಕ್ಷಿಸಂಕುಲ |
ಮುದುರಿದುವು ಗರಿಸಹಿತ ಬೆಂದಾ ವನದ ಮಧ್ಯದಲಿ ||೬||

ತೆಗೆದು ಹಾಯ್ದುವು ಸಿಂಹಶಾರ್ದೂ |
ಲಗಳು ಕರಿಗಳ ಹಿಂಡು ನಾನಾ |
ಮೃಗಗಳಗಣಿತ ಬೆಂದು ಬಿದ್ದುವು ನಿಮಿಷಮಾತ್ರದಲಿ ||
ಚಿಗಿದು ಹಾಯ್ದುಱೆ ಗಂಡಭೇರುಂ |
ಡಗಳು ಮೊದಲಾದಖಿಳಮೃಗಪ |
ಕ್ಷಿಗಳು ಕೆಡೆದುವು ಕಿಚ್ಚಿನೊಳಗವನೀಶ ಕೇಳೆಂದ ||೭||

ಪ್ರಳಯದಿನದಲಿ ಸುಳಿವ ಬಡಬಾ |
ನಲನ ಪರಿಯಿಂ ವನವ ಸುಡುತಲಿ |
ಸುಳಿಸುಳಿಯುತಾಹಾರಗೊಳುತಿರಲಲ್ಲಿ ದನಿಯಾಯ್ತು ||

ಸಿಲುಕಿದೆನು ಪಾವಕನೊಳೆನ್ನನು |
ವೊಲಿದು ಹಾ ನೃಪಕುಲಶಿರೋಮಣಿ |
ಕಳೆದು ಬಿಡಿಸೈ ಸುಕೃತ ನಿನಗಹುದೆಂದುದಾ ನಿನದ ||೮||

ಆಗಲಾ ದನಿಗೇಳಿ ನೃಪತಿ ಸ |
ರಾಗದಿಂದಲೆ ಬಂದು ಹೊಕ್ಕನು |
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ ||
ಹೋಗುತಿಧ್ದೆಯೆನ್ನಸುವು ಸಲಹು ಷ |
ಡಾಗಮಜ್ಞ ನೃಪಾಲ ಎನಲಾ |
ಭೋಗಿಯನು ಕಂಡರಸ ನೀನಾರೆಂದು ಬೆಸಗೊಂಡ ||೯||

ಉರಗಪತಿ ಕರ್ಕೋಟಕನು ನಾ |
ನರಸ ಕೇಳೈ ಬನದೊಳಿರುತಿರೆ |
ಪರಮಋಷಿ ಬಂದೆನ್ನ ತಾಗಿದನಂದು ಖಾತಿಯಲಿ ||
ಕರೆದು ಕೊಟ್ಟನು ಶಾಪವನು ಸಂ |
ಚರಿಸದಂತಿರೆಯೆನಗೆಯಿದು ಪರಿ |
ಹರವದೆಂದಿಗೆ ಮುನಿಪ ಕರುಣಿಪುದೆಂದೊಡಿಂತೆಂಧ ||೧೦||

ಇರಲಿರಲು ಕಾಲಾಂತರಕೆ ಭೂ |
ವರನು ನಳನೃಪನಿಲ್ಲಿಗೆಯ್ದುವ |
ಧರಣಿಪನ ಕರಕಮಲ ಸೋಂಕಲು ಶಾಪವಿದು ಬಳಿಕ ||
ಪರಿಹರಿಪುದೆನೆ ಮುನಿಯ ವಚನದಿ |
ಬರವ ಹಾರೈಸಿದೆನು ಬಂದ್ಯೆ |
ಕರುಣದಿಂದಗ್ನಿಯನು ಪರಿಹರಿಸೆಂದನುರಗಪತಿ ||೧೧||

ಕರುಣದಲಿ ನೃಪ ಭೀತಿಗೊಳ್ಳದೆ |
ಯುರಗಪತಿಯನು ತೆಗೆಯುತನಲನ |
ವುರಿಯ ತಪ್ಪಿಸಿ ತಂದು ಸರಸಿಯ ತಡಿಯೊಳುಪಚರಿಸೆ ||

ಕರವಿಡಿದು ಧರಣಿಪನ ಕಚ್ಚಿದೊ |
ಡುರವಣಿಸಿ ವಿಷವೇಱಿ ನೃಪತಿಯು |
ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ ||೧೨||

ಅಡ್ಡವೋರೆಯ ಗಂಟುಮೂಗಿನ |
ಜಡ್ಡುದೇಹದ ಗುಜ್ಜುಗೊರಲಿನ |
ದೊಡ್ಡ ಕೈಕಾಲುಗಳ ವುದುರಿದ ರೋಮವಿಾಸೆಗಳ ||
ದೊಡ್ಡ ಹೊಟ್ಟೆಯ ಗೂನುಬೆನ್ನಿನ |
ಗಿಡ್ಡರೂಪಿನ ಹಱಿಕುಗಡ್ಡದ |
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ||೧೩||

ಮಾರನಾಕಾರದ ನೃಪಾಲಕ |
ಕ್ರೂರರೂಪಾದನು ಪುರಾಕೃತ |
ವಿಾಱಲಾರಳವೆಂದು ನುಡಿದನು ತನ್ನ ಮನದೊಳಗೆ ||
ತ್ಟೋರಮಾಣಿಕವೆಂದು ಪಿಡಿದರೆ |
ಭೂರಿಕೆಂಡವಿದಾಯ್ತು ಹರಹರ |
ಕ್ರೂರಜಂತುಗಳೊಡನೆ ಸಖತನ ಫಲಿಸಿತೆನಗೆಂದ ||೧೪||

ಮುನ್ನ ಮಾಡಿದ ಕರ್ಮಫಲವಿದು ||
ಬೆನ್ನಬಿಡುವುದೆಯುರಗಪತಿ ಕೇ |
ಳಿನ್ನು ನೋಯಲದೇಕೆ ತಾನೇ ಪಾಪಿಯಾದೆನಲಾ ||
ಪನ್ನಗಾರಿಧ್ವಜನ ಕೃಪೆ ತನ |
ಗಿನ್ನು ತಪ್ಪಿದ ಬಳಿಕ ಲೋಕದೊ |
ಳಿನ್ನು ಸೈರಿಸಲಾರವಶವೆಂದೆನುತ ಮಱುಗಿದನು ||೧೫||

ಏಕೆ ನೃಪತಿ ವೃಥಾ ಮನೋವ್ಯಥೆ |
ಕಾಕು ಬಳಲಲು ಬೇಡ ನೀನವಿ |
ವೇಕಿಯೇ ಸಾಕಿನ್ನು ನಿನಗುಪಕಾರವಂಜದಿರು ||

## ೩೨. ಆರು ಒಲಿದರೇನು !

ಆರು ಒಲಿದರೇನು ನಮಗಿನ್ನಾರು ಮುನಿದರೇನು |
ಕ್ಷೀರಸಾಗರಶಾಯಿಯಾದವನ ಸೇರಿದಂಥ ಹರಿದಾಸರಿಗೆ ||ಪ||

ಊರನಾಳುವ ದೊರೆಗಳು ನಮ್ಮನು| ದೂರ ಅಟ್ಟಿದರೇನು |
ಘೋರಾರಣ್ಯದಿ ತಿರುಗುವ ಮೃಗಗಳು | ಅಡ್ಡಗಟ್ಟಿದರೇನು |
ಮಾರಿಹಿಂಡು ಮತ್ತೆ ಮುಸುಕಿನ ದಂಡು| ಮೈಗೆ ಮುತ್ತಿದರೇನು |
ವಾರಿಜನಾಭನ ವಸುದೇವಸುತನ| ಸೇರಿದಂಥ ಹರಿದಾಸರಿಗೆ ||೧||

ಹಡೆದಾ ತಾಯಿತಂದೆ ನಮ್ಮೊಳು| ಅಹಿತವ ಮಾಡಿದರೇನು |
ಮಡದಿಯು ಮಕ್ಕಳು ಮನೆಯ ನಂಟರು | ಮುನಿಸುಗೊಂಡರಿನ್ನೇನು||
ಒಡನೆ ಆಡುವಾ ಗೆಳೆಯರು ನಮ್ಮೊಳು| ವೈರವ ಬೆಳಸಿದರೇನು |
ಕಡಲಶಯನ-ಕರುಣಾನಿಧಿ-ನಾಮವು| ಒಡಲೊಳಗಿಹ ಹರಿದಾಸರಿಗೆ ||೨||

ಕಾನನದೊಳು ಹರಿದಾಡುವ ಸರ್ಪವು | ಕಾಲಿಗೆ ಸುತ್ತಿದರೇನು |
ಜೇನಿನಂದದಲಿ ಕ್ರಿಮಿಕೀಟಂಗಳು| ಚರ್ಮಕೆ ಮುತ್ತಿದರೇನು ||
ಭಾನುನಂದನನ ಬುಧಮಂಗಳರಾ| ಬಲವು ತಪ್ಪಿದರೆಯೇನು |
ದೀನನಾಥ-ಶ್ರೀಪುರಂದರವಿಠಲನ| ಧ್ಯಾನವುಳ್ಳ ಹರಿದಾಸರಿಗೆ ||೩||

— ಪುರಂದರದಾಸ



## ೩೩. ಬಿನ್ನಹಕೆ ಬಾಯಿಲ್ಲವಯ್ಯಾ!

ಬಿನ್ನಹಕೆ ಬಾಯಿಲ್ಲವಯ್ಯಾ।
ಅನಂತ ಅಪರಾಧ ಎನ್ನಲ್ಲಿ ಇರುತಿರಲು ॥ಪ॥

ಶಿಶುಮೋಹ ಸತಿಮೋಹ ಜನನಿ-ಜನಕರ ಮೋಹ।
ರಸಿಕಮಿತ್ರರ ಮೋಹ ರಾಜಮೋಹ॥
ಪಶುಮೋಹ ಭೂಮೋಹ ಬಂಧುವರ್ಗದ ಮೋಹ।
ಅಸುರಾರಿ ಇವುಗಳಿಂ ನಿನ್ನ ಮರೆತಿಹೆನು ॥೧॥

ಅನ್ನಮದ ಅರ್ಥಮದವಖಿಳ ವೈಭವದ ಮದ।
ಘನ್ನ ಪ್ರಾಯದ ರೂಪಬಲದ ಮದವು॥
ಇನ್ನು ಸತ್ವದ ಮದವು ಧಾತ್ರಿವಶವಾದ ಮದ।
ಚೆನ್ನ ತನಗೆದುರಿಲ್ಲವೆಂತೆಂಬ ಮದಗಳಿಂ ॥೨॥

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಶೆ।
ಅಷ್ಟುದೊರಕಿದರು ಇನ್ನಷ್ಟರಾಶೆ॥
ಕಷ ಬೇಡೆಂಬಾಶೆ ಕಡುಸುಖವ ಕಾಂಬಾಶೆ।
ನಷ್ಟಜೀವನದಾಶೆ ಪುರಂದರ ವಿಠಲಾ ॥೩॥

—ಪುರಂದರದಾಸ



## ೩೨. ಆರು ಒಲಿದರೇನು !

ಆರು ಒಲಿದರೇನು ನಮಗಿನ್ನಾರು ಮುನಿದರೇನು |
ಕ್ಷೀರಸಾಗರಶಾಯಿಯಾದವನ ಸೇರಿದಂಥ ಹರಿದಾಸರಿಗೆ ||ಪ||

ಊರನಾಳುವ ದೊರೆಗಳು ನಮ್ಮನು| ದೂರ ಅಟ್ಟಿದರೇನು |
ಘೋರಾರಣ್ಯದಿ ತಿರುಗುವ ಮೃಗಗಳು | ಅಡ್ಡಗಟ್ಟಿದರೇನು |
ಮಾರಿಹಿಂಡು ಮತ್ತೆ ಮುಸುಕಿನ ದಂಡು| ಮೈಗೆ ಮುತ್ತಿದರೇನು |
ವಾರಿಜನಾಭನ ವಸುದೇವಸುತನ| ಸೇರಿದಂಥ ಹರಿದಾಸರಿಗೆ ||೧||

ಹಡೆದಾ ತಾಯಿತಂದೆ ನಮ್ಮೊಳು| ಅಹಿತವ ಮಾಡಿದರೇನು |
ಮಡದಿಯು ಮಕ್ಕಳು ಮನೆಯ ನಂಟರು | ಮುನಿಸುಗೊಂಡರಿನ್ನೇನು||
ಒಡನೆ ಆಡುವಾ ಗೆಳೆಯರು ನಮ್ಮೊಳು| ವೈರವ ಬಳಸಿದರೇನು |
ಕಡಲಶಯನ-ಕರುಣಾನಿಧಿ-ನಾಮವು| ಒಡಲೊಳಗಿಹ ಹರಿದಾಸರಿಗೆ ||೨||

ಕಾನನದೊಳು ಹರಿದಾಡುವ ಸರ್ಪವು | ಕಾಲಿಗೆ ಸುತ್ತಿದರೇನು |
ಜೇನಿನಂದದಲಿ ಕ್ರಿಮಿಕೀಟಂಗಳು| ಚರ್ಮಕೆ ಮುತ್ತಿದರೇನು ||
ಭಾನುನಂದನನ ಬುಧಮಂಗಳರಾ| ಬಲವು ತಪ್ಪಿದರೆಯೇನು |
ದೀನನಾಥ-ಶ್ರೀಪುರಂದರವಿಠಲನ| ಧ್ಯಾನವುಳ್ಳ ಹರಿದಾಸರಿಗೆ ||೩||

— ಪುರಂದರದಾಸ



# ೩೩. ಬಿನ್ನಹಕೆ ಬಾಯಿಲ್ಲವಯ್ಯಾ!

ಬಿನ್ನಹಕೆ ಬಾಯಿಲ್ಲವಯ್ಯಾ |
ಅನಂತ ಅಪರಾಧ ಎನ್ನಲ್ಲಿ ಇರುತಿರಲು ||ಪ||

ಶಿಶುಮೋಹ ಸತಿಮೋಹ ಜನನಿ-ಜನಕರ ಮೋಹ |
ರಸಿಕಮಿತ್ರರ ಮೋಹ ರಾಜಮೋಹ ||
ಪಶುಮೋಹ ಭೂಮೋಹ ಬಂಧುವರ್ಗದ ಮೋಹ |
ಅಸುರಾರಿ ಇವುಗಳಿಂ ನಿನ್ನ ಮರೆತಿಹೆನು ||೧||

ಅನ್ನಮದ ಅರ್ಥಮದವಖಿಳ ವೈಭವದ ಮದ|
ಘನ್ನ ಪ್ರಾಯದ ರೂಪಬಲದ ಮದವು||
ಇನ್ನು ಸತ್ವದ ಮದವು ಧಾತ್ರಿವಶವಾದ ಮದ|
ಚೆನ್ನ ತನಗೆದುರಿಲ್ಲವೆಂತೆಂಬ ಮದಗಳಿಂ ||೨||

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಶೆ|
ಅಷ್ಟುದೊರಕಿದರು ಇನ್ನಷ್ಟರಾಶೆ ||
ಕಷ್ಟ ಬೇಡೆಂಬಾಶೆ ಕಡುಸುಖವ ಕಾಂಬಾಶೆ|
ನಷ್ಟಜೀವನದಾಶೆ ಪುರಂದರ ವಿಠಲಾ ||೩||

—ಪುರಂದರದಾಸ



# ೩೪. ಬಿಡು ಬಾಹ್ಯದೊಳು ಡಂಭವ !

ಬಿಡುಬಾಹ್ಯದೊಳು ಡಂಭವ| ಮಾನಸದೊಳ|
ಗೆಡೆವಿಡಿದಿರು ಶಂಭುವ ||ಪಲ್ಲ||

ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ |
ಪಡೆದರೆ ಶಿವ ನಿನಗೊಲಿವನೆ ಮರುಳೆ ||ಅ.ಪ.||

ಜನಮೆಚ್ಚಿ ನಡೆಕೊಂಡರೇನುಂಟು ಲೋಕದಿ |
ಮನಮೆಚ್ಚಿ ನಡೆಕೊಂಬುವುದೆ ಚೆಂದವು ||
ಜನರೇನು ಬಲ್ಲರು ಒಳಗಾಗೋ ಕೃತ್ಯವ |
ಮನವರಿಯದ ಕಳ್ಳತನವಿಲ್ಲವಲ್ಲ ||೧||

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ |
ಜನ ಮೆಚ್ಚದಿರೆ ಶಿವ ಬಿಡುತಿಹನೆ ||
ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ |
ಚಿನುಮಯ ಶಿವನೇನಲ್ಲರಿಯನೆ ಮರುಳೆ ||೨||

ಮನದೊಳು ಶಿವ ತಾನೆ ಮನೆಮಾಡಿಕೊಂಡಿಹ |
ಮನ ಮೆಚ್ಚಿ ನಡೆದರೆ ಶಿವ ಮೆಚ್ಚುವ ||
ಮನಕಂಜಿ ನಡೆಯದೆ ಜನಕಂಜಿ ನಡೆದರೆ |
ಮನದಾಣ್ಮ ಗುರುಸಿದ್ಧ ಮರೆಯಾಗುವನಲ್ಲ ||೩||

—ಸರ್ಪಭೂಷಣ ಶಿವಯೋಗಿ



# ೩೫. ನಾಟಕಶಾಲೆ

ನಾಟಕ ಶಾಲೆಯಂತಿಂತಿರ್ಪುದೆಂದು ಕ|
ರ್ಣಾಟಸಿಪೇಳಲಾನರಿಯೆ||
ಕೋಟಿ ರತ್ನಗಳಿಂದ ಸುರರ ವಿಮಾನಕೆ|
ಸಾಟಿಯೆಂದಾಡಿ ಬಿಡುವೆನು ||೧||

ಮಿಸುನಿಗಂಬಗಳಿಂದ ಮಿಸುನಿಗೋಡೆಗಳಿಂದ|
ವಸುಮಣಿಗಳ ತೊಲೆಯಿಂದ ||
ಮಸುಳದಿರುಳು ಪಗಲೆನ್ನದೆ ತಣ್ಪಿನ|
ಬಿಸಿಲ ಕರೆವುದನೇನೆಂಬೆ ||೨||

ಸಿರಿಗಂಪು ಕುಂಕುಮ ಪನ್ನೀರು ಸಾದು ಕ|
ಸ್ತುರಿಯ ಸಾರಣೆ ಚಳೆಯಗಳಾ ||
ಪೊರಪಿಂದ ಸ್ವರ್ಗದ ಕಂಪ ತುಂಬಿದ ಹೊನ್ನ|
ಕರಡಿಗೆಯಂತೊಪ್ಪುತಿಹುದು ||೩||

ಪುಷ್ಪಮಾಲೆಗಳಿಂದ ಪುಷ್ಪದ ಕುಚ್ಚಿಂದ|
ಪುಷ್ಪೋಪಹಾರಗಳಿಂದ||
ಪುಷ್ಪಾಸ್ತ್ರನಾಡುವ ನಾಟಕ ಶಾಲೆಯು|
ಪುಷ್ಪೆನಲುರುಹಿ ಕಳೆವುದು ||೪||

ಮೇಲು ಕಟ್ಟಿನ ಝುಲ್ಲಿಗಳು ನೆಲ ಕಟ್ಟಿನ |
ನೀಲ ರತ್ನದೊಳು ಮಾರ್ಪೊಳೆಯೆ||
ಸಾಲು ಬೆಳ್ನೊರೆಯೆದ್ದ ಮಡುವೆಂಬ ಶಂಕೆಯ|
ನೇಳಿಸುತಿಹುದು ನೋಳ್ಪರಿಗೆ ||೫||

ಮುತ್ತಿನ ಕುಚ್ಚು ಮಾಣಿಕಗಳ ಮಾಲೆ ಮೇ|
ಲೆತ್ತಿರ್ದು.ಕೆಳಗೆ ಬಿಂಬಿಸಲು||
ಮುತ್ತು ಮಾಣಿಕವನೀ ಮನೆಯೊಳೇತಕೆ ತಂದು'
ಬಿತ್ತಿದರೆಂಬವೊಲಿಹುದು ||೬||

ಚಕಚಕಿಸುತ ರನ್ನಗನ್ನಡಿಯಲ್ಲಲ್ಲಿ|
ಮಕರಿಸೆ ಸಾಲು ಸಾಲಾಗಿ||
ಅಕಳಂಕ ಚಂದ್ರಲೋಕವೊಯೆನೆ ನೃಪನ ನಾ|
ಟಕಶಾಲೆ ಮೆರೆವುದೇನೆಂಬೆ ||೭||

ಪಟ್ಟಿಪರ್ವತದ ಮೇಲ್ಗಟ್ಟಿನ ಬೊಂಬೆಗ|
ಳೊಟ್ಟು ಮಾರ್ಪೊಳೆಯೆ ಭೂಮಿಯೊಳು||
ಇಟ್ಟಣಿಸಿದ್ದುದು ಜನವೆಂದು ಹೊಸಬರು|
ಮೆಟ್ಟದೆ ನಿಲ್ವರಂಚಿನೊಳು ||೮||

ಧರೆಗೆ ವಿಸ್ಮಯವಾದ ನಾಟಕಶಾಲೆಯೊ|
ಳರಸನೋಲಗವಾಗಲೊಡನೆ ||
ಬರುತಿದ್ದರುಚಿತ ಕಲಾವಿದರೆಸೆವ ಸಿಂ|
ಗರಗೂಡಿ ಘಮ್ಮೆನುತಾಗ ||೯||

ರಾಜಕುಮಾರರು ರಸಿಕರು ಬುಧರಧಿ |
ರಾಜರು ಕವಿಗಮಕಿಗಳು ||
ತೇಜಿಷ್ಟರೈತಂದು ಭರತರಾಜನ ಕಂಡು|
ತೇಜದೊಳೊಲ್ದು ಕುಳಿತರು ||೧೦||

ತೆರೆಸೇಲೆ ಮರೆಯೊಳಾ ತೆರೆದ ಗವಾಕ್ಷದೊ|
ಳೊರೆದು ನೋಡುತ ಬಾಹ್ಯ ಜನವಾ||
ಅರಸಿಯರಿದ್ದರು ಭೂಪಾಲನೆಡಬಲ|
ದೆರಡು ಪಕ್ಕದೊಳು ಸಾಲಾಗಿ ||೧೧||

ಒಲೆಯದಿರೊತ್ತದಿರೊಯ್ಯಾರದೊಳು ಕುಳ್ಳಿ|
ರುಲಿಯದಿರಲ್ಲಲ್ಲಿರೆಂದು ||
ಸುಳಿದು ಕಟ್ಟೆಗೆಕಾರರೆಲ್ಲರ ತರವರಿ|
ದೊಳುನುಡಿದೋರಿ ತಿದ್ದಿದರು ||೧೨||

ಪರಿಮಳದಿಂದುಚಿತಾಸನದಿಂದ ಕ|
ಪ್ಪುರ ವೀಳೆಯದಿಂದ ಸಭೆಯಾ||
ತರತರವರಿದು ಮನ್ನಿಸಿದರು ಪರಿಚಾರ|
ಕರು ರಾಯನನುಮತದಿಂದ ||೧೩||

ರತ್ನಾಕರವರ್ಣಿ–ಭರತೇಶ ವೈಭವ



## ೩೬. ಕಲ್ಯಾಣ ದೇಶ

ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಟೆಗಳಿಂ|
ದಲ್ಲಿಗಲ್ಲಿಗೆ ನೆಱೆದ ತಳಗಳಿಂ ಕೊಳಗಳಿಂ |
ದಲ್ಲಿಗಲ್ಲಿಗೆ ರನ್ನದರೆಗಳಿಂ ಕೆಱೆಗಳಿಂ
ಪರಿವ ಕಾಲುವೆಗಳಿಂದ ||
ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ |
ದಲ್ಲಿಗಲ್ಲಿಗೆ ನೆಱೆದ ಶುಕಗಳಿಂ ಪಿಕಗಳಿಂ|
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂ
ದಾದೇಶವೊಪ್ಪಿರ್ದುದು ||೧||

ಕಂಜಕುಮುದಂಗಳಿಲ್ಲದ ಸರಂ ಸರದಿಂದ |
ರಂಜಿಸದ ಶುಕಪಿಕಂ ಶುಕಪಿಕಂಗಳಿಗೆ ಫಲ |
ಮಂಜರಿಯನೀಯದಿಹ ಮಾವು ಮಾವುಗಳನ
ಪ್ಪದಬಳ್ಳಿಬಳ್ಳಿಗಳೊಳು ||
ಮಂಜುಳಧ್ವನಿಗೊಡದ ಪಱಮೆ ಪಱಮೆಗೆ ಸಂತ |
ಸಂ ಜನಿಸದರಲರಲ ನವಪರಿಮಳಂಗಳಿಂ |
ದಂ ಜಡಿಯದೆಳಗಾಳಿಯೆಳಗಾಳಿಯಿಲ್ಲದಿಹ
ಬನಮಿಲ್ಲವಾನಾಡೊಳು ||೨||

ದೇವಮಾತೃಕನದೀಮಾತೃಕದೊಳಂ ಬೆಳೆವು |
ದಾವ ಚೋದ್ಯಂ ಗಿಳಿ ಕರ್ದುಂಕಿದೊಡೆ ಬಿದ್ದಿನಿಡು |
ಮಾವಣ್ಣತನಿರಸದ ಕಾಲ್ಗಳಂ ಬೆಳೆವುವಾ
ಗಾಳಿಯಲೆದೋಸರಿಸುವ ||
ತೀವಿದೆಳನೀರ ಕಬ್ಬಿನ ಸಾರದಿಂ ಬೆಳೆವು |
ವಾವಗಂ ಪಾಮರೀಮುಖಶಶಿಗೊಸರ್ವಿಂದು |
ಗ್ರಾವನಿರ್ಮಳಜಲದ ಪೂರದಿಂ ಬೆಳೆಯುತಿಹ |
ಶಾಲಿಗಳ್ ಕಣ್ಗೆಸೆದುವು ||೩||

ಪಲವುಕಾಲಂ ಬೆಳೆದಿದೇಂ ಫಲಂ ಕಡೆಯಲ್ಲಿ |
ತಲೆಗೊಯ್ಸಿಕೊಂಬುದೆಂದುಂ ಬಿಡದೆನುತ ನಾಣ್ಚಿ|
ತಲೆವಾಗಿದುವೊ ಪುತ್ರಮೋಹದಿಂ ಪ್ರತಿದಿನಂ
ತನ್ನ ನೋವಂ ನೋಡದೆ ||
ಸಲಹಿದೀ ಭೂದೇವಿಗಂ ನಮಿಸಿ ಭಕ್ತಿಯಿಂ |
ನಲಿದು ಬಾಗಿದುವೊ ಪೇೞೆಂಬಿನಂ ಕಿಕ್ಕಿಱಿದ |
ಫಲಭಾರದಿಂ ಕೊರಳ್ವಾಗಿ ಕಂಗೊಳಿಸಿರ್ದ |
ಶಾಲಿಗಳ್ ಕರಮೆಸೆದುವು ||೪||

ತುಂಡುತುಂಡಾಗಿ ಕತ್ತರಿಸಿ ಗಾಣದೊಳಱೆದು ।
ಹಿಂಡಿ ರಸಮಂ ತೆಗೆದು ಕಾಸಿಕಾಲ್ಬುಳಿಯಲ್ಕೆ ।
ಖಂಡಶರ್ಕರೆಯಾದುವೇಗೈದೊಡಂ ಸುಗುಣ ।
ಮಂ ಬಿಡದ ಸುಜನರಂತೆ ॥

ದಿಂಡುರುಳ್ಚಿದೆವಾಳ್ದಗಿದಿರಾದರಂ ಸುಕೋ ।
ದಂಡರೂಪಿಂ ಸ್ವಾಮಿಹಿತಕೆಂದು ತಮ್ಮೊಳು ।
ದ್ದಂಡತೆಯ ಬಿರುದೆತ್ತಿತೆನೆ ಸೋಗೆವಸುರ ಕ ।
ಬ್ಬಿನಕೊಂಬು ಕಣ್ಗೆಸೆದುದು ॥೫॥

ಸುರಿದ ಶಾಲ್ಯನ್ನರಾಶಿಗಳ ಘೃತಪೂರಿತದ ।
ಹರವಿಗಳ ಸೂಪಾದಿಶಾಕಸಂತತಿಯ ಪರಿ ।
ಪರಿಯ ಪಚ್ಚಡಿಯುಪ್ಪುಗಾಯ್ ಭಕ್ಷ್ಯಪರಮಾನ್ನ
ಬಹುವಿಧದ ಸಿಯ್ಕರಣೆಯ ॥

ತರತರದ ದಧಿದುಗ್ಧತಕ್ರದಿಂ ಪುದಿದ ಕೊ ।
ಪ್ಪರಿಗೆಗಳನುಂಡುಂಡು ಪೋಪ ನಡೆತಪ್ಪ ಪಥಿ ।
ಕರ ನೆಱವಿಗಳ ಸತ್ರದಾಲಯಂ ರಂಜಿಸಿದು
ದಾಪಥದೊಳೇನೆಂಬೆನು ॥ ॥೬॥

ಮುಂತೆಸೆದುದಾಗಳಾ ಘನವಿಭವದಿಂ ಮುಕ್ತಿ ।
ಕಾಂತೆಯರಮನೆಯಂತೆ ಪುಣ್ಯದಾಲಯದಂತೆ ।
ಸಂತತಂ ಶೈವನೇಮದ ಕೋಶಗೃಹದಂತೆ
ಧರೆಯ ಮುಖಕಮಲದಂತೆ ॥

ತಿಂತಿಣಿಯೊಳೆಸೆವ ಸೌಧಂಗಳ ಮರೀಚಿ ಗಗ ।
ನಾಂತಮಂ ಚುಂಬಿಸಲ್ ಸಕಲ ಸೌಭಾಗ್ಯಮಂ ।
ತಾಂ ತಳೆದ ಪಟ್ಟಣಂ ಕಲ್ಯಾಣಮೆಸೆವ ಜಾ
ಣರ ತಾಣಮೊಪ್ಪಿರ್ದುದು ॥೭॥

ಪೊಸತೆಂಗು ಕೌಂಗು ಹೇರಿಳೆ ಕಿತ್ತಿಳೆಗಳು ಶೋ |
ಭಿಸುವಂಚೆ ಕೊಂಚೆ ಪೂವಂಡು ಗಿಳಿವಿಂಡು ರಂ |
ಜಿಸುವ ಕಾದಲರೆಲರ್ ಸವಿಮಾವು ಪೂವು ಬಕು |
ಳಂ ಮುಕುಳವೊಪ್ಪುವ ಕೊಳಂ ||

ಮಿಸುಪ ನಳಿನಂ ಪುಳಿನಮುಂ ತುಂಬಿ ತುಂಬಿ ರಾ |
ಜಿಸುವಶೋಕಂ ಕೋಕಮಾದಾಡಿಮುಂ ಹಿಮುಂ |
ದೆಸೆಗಂಪು ಸೊಂಪು ಪೆಂಪಿಂದಾಪುರೋಪವನ
ಮೆಸೆದಿರ್ದುದೇನೆಂಬೆನು ||೮||

ನವಿಲ ನಟನೆಯೆ ನರ್ತನಂ ಮೊರೆವ ತುಂಬಿಗಳ |
ರವಮೆ ಗೀತಂ ಕೋಕಿಲಧ್ವನಿಯೆ ವಾದ್ಯಮೊ |
ಪ್ಪುವ ಮರುತನಿಂಕೆದರ್ವಕುಸುಮುಂಗಳೆಸೆವ ಪು |
ಷ್ಪಾಂಜಲಿಗಳಂದಮಾಗೆ ||

ನವಪಾತ್ರಮುಂ ವಸಂತಂ ತಿದ್ದಿ ತಂದಂಗ |
ಭವನ ಮುಂದಾಡಿಸಲ್ ಸವೆದಿರ್ದ ಸಲ್ಲಾಸ್ಯ|
ಭವನದಂತೊಪ್ಪಿರ್ದುದುಪವನಂ ಜನಪದದ
ಜನರಿಗಚ್ಚರಿಯಿಾಯುತ ||೯||

ಸರಸಿಯೊಳಗಾಡುವರಸಂಚೆಯಿಂ ಕೊಂಚೆಯಿಂ |
ಬಿಱಿವ ಮುಗಳ್ಗಿಱಿಗುವ ಮದಾಳಿಯಿಂ ಗಾಳಿಯಿಂ |
ವರಫಲವನುಂಬ ಪೊಕ್ಕುಳಿಗಳಿಂ ಗಿಳಿಗಳಿಂ
ಲತೆವನೆಗಳೋವರಿಯೊಳು ||

ಹರುಷದಿಂದೊಪ್ಪುವ ಜನಾಳಿಯಿಂ ಕೇಳಿಯಿಂ |
ಮೊಱೆವ ನಾನಾಪಕ್ಷಿ ಜಾಳದಿಂ ಮೇಳದಿಂ |
ದರಲ್ವ ಪೂಗಳ ಸೊಗಸುಗಂಪಿನಿಂ ಪೆಂಪಿನಿಂ
ವನವನಂಗಳ್ ಮೆಱೆದುವು ||೧೦||

ಅಲ್ಲಿಗಲ್ಲಿಗೆ ಲತಾಮಂಟಪಂಗಳು ನೋಡ |
ಲಲ್ಲಿಗಲ್ಲಿಗೆ ತಳಿರ ಚಪ್ಪರಂಗಳು ಬಟಿ |
ಕ್ಕಲ್ಲಿಗಲ್ಲಿಗೆ ಪೂಗಳಿಂ ಸಮೆದು ತೋರ್ಪ ಚಾ
ವಡಿ ಮಲಗುಮಾಡಂಗಳು ||

ಅಲ್ಲಿಗಲ್ಲಿಗೆ ಮಾಡುವೆಟ್ಟು ತಳಿರುಯ್ಯಲೆಗ|
ಳಲ್ಲಲ್ಲಿ ಪನ್ನೀರ ಕಾಲ್ಗಳಱವಟ್ಟಿಗೆಗ |
ಳಿಲ್ಲಿ ಡೆಯೊಳಿಂತು ಸಾಹಸ್ರಯೋಜನವನಂ |
ಕಣ್ಗೆಸೆದುದೇನೆಂಬೆನು ||೧೧||

ತಳಿರ ಗುಡಿ ತೋರಣದ ಸಾಲ್ಗಳಿಂದೆಡೆಗೆಡೆಗೆ |
ತೊಳಪ ಮುಕುಳದ ಮಕರತೋರಣಗಳಿಂದೆ ಪೂ |
ಗಳ ಕುಱುಜು ದೊಡ್ಡ ಮೇರುವೆಗಳಿಂದವಱನೆಲೆ
ನೆಲೆಗಳೊಳು ಕಂಗೊಳಿಸುವ ||

ನಲಿದು ನರ್ತಿಸುವ ಪೂವಲಿಗೆದರ್ವ ಕಲಿತ ಪರಿ |
ಮಳಜಲಂಗಳನೆ ಜೀರ್ಕೊಳವಿಯಿಂದಿಸುವ ಪೂ |
ಗಳ ಬೊಂಬೆಗಳ ಸಾಲ ಳಿಂದ ಚೆಲ್ವಾದುದಾ |
ಬನಮದೇಂ ವರ್ಣಿಸುವೆನು ||೧೨||

(ವಿರೂಪಾಕ್ಷ ಪಂಡಿತ - ಚೆನ್ನಬಸವ ಪುರಾಣ)



## ೩೭. ಕಾಳಿಯ ಮರ್ದನ

ಮತ್ತೆ ಗೋಪಕುಮಾರಕರು ಸಹಿ |
ತುತ್ತಮಾಮಳಕೀರ್ತಿ ತುರುಗಳ |
ವೊತ್ತ ಸಹಿತಾಡುತ್ತ ವೃಂದಾರಕವನಾಂತರಕೆ ||
ತತ್ತ್ವನಿಧಿ ಗೋಪಿಯರ ಕಂಗಳು |
ಚಿತ್ತವೃತ್ತಿಗಳೊಡನೊಡನೆ ಕಳು |
ಹುತ್ತ ಬರೆ ಕರುಣಾಳು ಬಿಜಯಂಗೈದನೊಲವಿನಲಿ ||೧||

ಹಿಂದಿರಿಸಿ ಬಲರಾಮನನು ಗೋ |
ವಿಂದನಾಡುತ ತುರುಸಹಿತ ಮ |
ಧ್ಯಂದಿನದ ವೇಳೆಯಲಿ ನಲಿದಾ ಗೋವಳರು ಸಹಿತ ||
ಬಂದನಾ ಕಾಳಿಯ ಮಹೋರಗ |
ಮಂದಿರದ ದುಸ್ಸಹವೆನಿಪ ಕಾ |
ಳಂದಿಗಾಗಿತ್ತಡಿಯ ವಿಷದಿಂಮುರಿವ ಜಲದೆಡೆಗೆ ||೨||

ಬಿಸಿಲರ್ಝುಳದಲಿ ನೀರಡಸಿ ಪಶು |
ವಿಸರ ಕವಿದುದುವುರಗರಾಜನ |
ವಿಷದ ಮಡುವಿನ ದೆಸೆಗೆ ಗೋಪಕುಮಾರಕರು ಸಹಿತ ||
ಅಸುರರಿಪುವಿನ ಕೃಪೆಯನದನೀ |
ಕ್ಷಿಸುವವೋಲುದಕವನು ಕುಡಿಕುಡಿ |
ದಸುವ ನೀಗಿದರರ್ಭಕರು ತುರುವಿಂಡುಗಳು ಸಹಿತ ||೩||

ಮೇಲೆ ಹಾರುವ ವಿಹಗವಿಷದ |
ಜ್ವಾಲೆಯಲಿ ಗರಿಸೀದು ಜಲದಲಿ |
ಬೀಳುವುವು ತತ್ತೀರವನತರುನಿಕರವುರಿಹೊಯ್ದು ||

ಹೇಳಲೇನೊಣಗಿರಲು ನೋಡದೆ |
ಬಾಲಕರು ತುರುವಿಂಡುಸಹಿತ ಕ |
ರಾಳವಿಷಜಲಪಾನಮೂರ್ಛಿತರಾದರಾಕ್ಷಣಕೆ ||೪||

ಕಂಡನಾ ಕೋಳಾಹಳದ ತುರು |
ವಿಂಡುಗಳ ನಾಶವನು ಗೋಪರ |
ತಂಡದಸುಸಂಕ್ಷಯವನಕಟಕಟೇನಿದೇನೆನುತ ||
ಕಂಡುನಿಜದೃಷ್ಟಿಯಲಿ ಕಾಲನ |
ದಂಡವೀ ಜಲವಾಯ್ತು ಜೀವವ |
ಕೊಂಡುದಿದೆಲಾ ಹಾಯೆನುತ ನೋಡಿದನು ಕರುಣದಲಿ ||೫||

ನೋಡಿದಾಗಳೆ ಶಿಶುಪಶುಗಳನು |
ಕೂಡೆ ಪಸರಿಸಿ ಬಿಗಿದ ನಿಪ್ಪೆಯು |
ಕೇಡಿನಲಿ ಸ್ಯೆಮುರಿದು ಕಂದೆರದಂತೆ ತವುತವುಗೆ ||
ಆಡುತಿದ್ದರು ತುರುಸಹಿತ ದಿಟ |
ನೋಡಿದಡೆ ಬ್ರಹ್ಮಾಂಡಕೋಟಿಯ |
ಮಾಡಳೇನಜಮಾಯೆಯಾವನ ನಯನಸಂಜ್ಞೆಯಲಿ ||೬||

ಕೆಟ್ಟುದೀಪರಿಯಕಟಕಟ ಗಡಿ |
ಗೆಟ್ಟ ಜಲಚರನಿಕರವನು ನೆರೆ |
ಸುಟ್ಟುದೀವನತರುಗಳುರಿವುತ್ತಿಹ ವಿಷಾಗ್ನಿಯಲಿ ||
ಮುಟ್ಟಿದವರಿಂಗೀ ಹದನು ಕೈ |
ಯಟ್ಟುತಿದೆಲಾ ಪಾಪಿಯನು ಯೆ |
ಬ್ಬಟ್ಟದಲ್ಲದೆ ನದಿಯ ಜಲವಿದು ಸೇವ್ಯವಲ್ಲೆಂದ ||೭||

ಮಜ್ಜನನವಿದು ಸಕಲ ಲೋಕದ |
ಸಜ್ಜನಾನುಗ್ರಹಕೆ ಕಾರಣ |
ದುರ್ಜನರ ನಿಗ್ರಹಕೆ ಕಾರಣವಾಗಿ ಮತ್ತಿಂದು ||

ವರ್ಜಿಸಿದಡಿದನಾರು ಮಾಡುವ |
ಸಜ್ಜನಾನುಗ್ರಾಹಕರು ದಿಟ |
ಕಬ್ಜಜಾದಿಮಹೇಶರಿಂದಕೆ ಸಮರ್ಥರಲ್ಲೆಂದ

ಎನುತ ಮನದಲಿ ನೋಡಿ ಕರುಣಾ |
ವನಧಿ ಪೀತಾಂಬರದ ಸೆರಗನು |
ಕನಕರಶನಾಬದ್ಧದಲಿ ರಂಜಿಸಲು ಬಿಗಿದುಟ್ಟು ||
ದನುಜರಿಪು ಕುರುಳೋಳಿಗಳನೊ |
ಯ್ಯನೆ ತೆಗದು ಬಿಗಿದೆಸೆವ ಮುಡಿಗಂ |
ಟನಲಿ ನೇವರಿಸಿದನು ಮಿಗೆ ಮುಂಗೈಯ ಕಂಕಣವ

ವಿಷಜಲಾಶಯದಂತರದಲೊಂ |
ದೆಸೆವ ಕಡಹದತರು ಮಹಾದ್ರುಮ |
ವಸಮವೆನೆ ಪಲ್ಲವಿಸಿ ಮುಗಿಲುದ್ದದಲಿ ಬೆಳೆದಿರಲು ||
ಅಸುರರಿಪು ನಗುತಡರಿದನು ಪದ |
ಬಿಸರುಹಂಗಳು ಕೆಂಪಡರಲಾ |
ಗಸದಲಮರಾವಳಿಯುಘೋಯೆನಲಾ ಮಹಾದ್ರುಮವ

ಗಂಡುಗಲಿಗಳ ದೇವನೊಡರಿಸಿ |
ದಂಡೆಯುನಃ ಬೊಬ್ಬಿರಿದು ಮರದಿಂ |
ದಿಂಡುವಾಯ್ದನು ದುರ್ನಿರೀಕ್ಷಣವೆನಿಪ ಮಡುವಿನಲಿ ||
ಕಂಡು ಸುರರಂಬರದಲದನಾ |
ಖಂಡಲಾದ್ಯರು ತಮತಮಗೆ ಭಯ |
ಗೊಂಡು ಮರುಗಿದರರಿಯದವರನುಪಮನ ಮಹಿಮೆಗಳ

ಕೇರಿ ಹಾಯ್ದಡೆ ವಿಷದ ಮಡುವದು |
ನೂರು ಬಿಲ್ಲಂತರ ದಡಕೆ ನೀ |
ರೇರಲುಕ್ಕಿತು ಬಹುಳತರ ನಿರ್ಘೋಷದಲಿ ಜಡಿದು ||

ಕಾರಿದನು ಕಡುಗನಲಿದಹಿಪತಿ |
ಘೋರ ವಿಷವನು ಭುವನಜನ ಸಂ |
ಹಾರ ಸಮಯವಿದಾಯ್ತೆನಲು ಬೆದರಿಸಿತು ಮೂಜಗವ ||೧೨||

ಮತ್ತಗಜದಂದದಲಿ ತೋಳ್ಗಳ |
ನೆತ್ತಿ ಹೊಡವುತ್ತಡಿಗಡಿಗೆ ಕಲ |
ಕುತ್ತ ಮಂದರದಂತೆ ಮಂದರಧಾರಿ ಮುರಿಮುರಿದು ||
ಸುತ್ತಿಸುಳಿವುತ್ತಿರಲು ಕಾಳಿಯ |
ದೆತ್ತಣದು ಬಲು ರಭಸವೆನುತು |
ದ್ವೃತ್ತಫಣಮಂಡಲದಲಾಲಿಸಿದನು ಮಹಾರವವ ||೧೩||

ನೋಡಲರಿದಮರರಿಗೆ ತನ್ನಯ |
ಬೀಡನಿದನಾ ವಿಹಗಪತಿ ಮಾ |
ತಾಡಲಾರನು ಮಿಕ್ಕವರುಯೀ ವಿಷದ ಮಡುವಿನಲಿ ||
ಕೂಡಲಮ್ಮುವರುಂಟೆ ಹೋ ಕೋ |
ಲಾಡುವವರಾರೋ ದುರಾತ್ಮರ |
ನೋಡುವೆನು ತಾನದನೆನುತ್ತುರಗೇಂದ್ರನೈತಂದ ||೧೪||

ಕ್ಷೀರವಾರಿಧಿಶಯನನಾ ವಿಷ |
ವಾರಿ ಕೇಳಿಯಲಿರಲು ಕಾಣುತ |
ಚಾರುಚರಣಾಂಬುಜದ ತಳವನುದಾರರೇಖೆಗಳ ||
ವೀರಬಾಲಕನಾರೆನುತ ಕಾ |
ಕೋರಗನು ಕಮನೀಯ ಮೂರ್ತಿಯ |
ಭೂರಿತೇಜವನಾವರಿಸುತೈತಂದನುರೆ ಮುನಿದು ||೧೫||

ಊರಿ ವರ್ಮಂಗಳನು ಭುವನಾ |
ಧಾರಮೂರ್ತಿಯನೊಂದಧಿಕವಹ |
ನೂರುಮುಖದಲಿ ಸುತ್ತಿಕೊಂಡೊಳಗಿಕ್ಕಿ ತೆಕ್ಕೆಯಲಿ ||

ತೋರಿದನು ನಿಜವಿಷದ ವೀರ್ಯದ |
ಸಾರತರ ಸಾಮರ್ಥ್ಯವನು ದು |
ರ್ವಾರನಖಿಳೇಶ್ವರನೊಡನೆ ನಾಗೇಂದ್ರನುರೆ ಮುನಿದು ||೧೬||

ಇತ್ತಲುರಗನ ಬಂಧದಲಿ ಹರಿ |
ಮೂರ್ತಿ ಮುಳುಗಿರೆ ಕಾಣುತಾ ತಡಿ |
ಯತ್ತಲಾ ಕೆಳೆಯರು ನಿಜಾತ್ಮಪ್ರಾಣನಾಥನನು ||
ಎತ್ತಲೇನಾದನೊಯೆನುತ ಮೊಗ |
ವೆತ್ತಿ ನೋಡುತ ನೋಡುತವನಿಯ |
ಲತ್ತು ಕೆಡೆದರು ಮೂರ್ಛೆಯಲಿ ಗೋಪಾಲಬಾಲಕರು ||೧೭||

ಏನನೆಂಬೆನು ಭೂಪ ಮನ ದು |
ಮ್ಮಾನದಲಿ ಪಶುಗಳು ಸಹಿತ ಕೃ |
ಷ್ಣಾನನಾರ್ಪಿತ ದೃಷ್ಟಿಯಲಿವೊಗುವಶ್ರುಪೂರದಲಿ ||
ಕಾನನದ ಚಿತ್ರದವೊಲುತ್ಕಟ |
ದೀನ ಭಾವವ ತಳೆದು ಮೂರ್ಛಾ |
ಧೀನವೃತ್ತಿಗಳಾಗಿ ಮಿಡುಕುತ ನಿಂದರೀಕ್ಷಿಸುತ ||೧೮||

ತೋರಿದುವು ಗೋಕುಲದಲತ್ತಲು |
ಮೂರುವೆರೆದುತ್ಪಾತವವನಿಯ |
ನೋರು ಗುಡಿಸುವವೋಲು ನಭದಲಿ ಧರೆಯಲಾತ್ಮನಲಿ ||
ದೂರಿದುವು ಕಾನನದಲೊಬ್ಬನೆ |
ಬೇರೆ ರಾಮನನುಳಿದು ಹರಿತುರು |
ಗಾರರೊಡನೈದಿದುವನರಿದಳಲಿದುದು ಜನನಿವಹ ||೧೯||

ಪ್ರಳಯದುತ್ಪಾತಂಗಳಾರಿಂ |
ಗಳಿವ ತರುವುವೊ ಹಾಯೆನುತ ಗೋ |
ಕುಲದ ಜನ ತನತನಗೆ ವಿಗತಪ್ರಾಣರಾದಂತೆ ||

ನಿಳಯವನು ಹೊರವಂಟು ಹರಿಯುಳಿ ।
ದುಳಿವರಾವಲ್ಲೆನುತ ಹೊರವಂ ।
ಟಳುತ ನಡೆದುದು ಕೂಡೆ ವೃಂದಾವನಕೆ ಕಳವಳಿಸಿ ॥೨೦॥

ಮುಂದೆ ತುರುಗಳ ಹಜ್ಜೆಗೊಂಡಾ ।
ನಂದ ಗೋಪಾದ್ಯಖಿಳ ಗೋಪರ ।
ವೃಂದವಾಗೋಪಾಂಗನೆಯರಾಬಾಲವೃದ್ಧಜನ ॥
ಸಂದಣಿಸಿ ನಡೆತಂದುದಾ ಕಾ ।
ಳಿಂದಿಗೇಳುತ ಬೀಳುತಾ ಗೋ ।
ವಿಂದ ಮೂರ್ತಿಯನೀಕ್ಷಿಸುವ ಮನದೊಂದು ತವಕದಲಿ ॥೨೧॥

ಅಲ್ಲಿಗಲ್ಲಿಗೆ ಮೆರೆವ ಹರಿಪದ ।
ಪಲ್ಲವದ ವಜ್ರಾಂಕುಶಧ್ವಜ ।
ಸಲ್ಲಲಿತ ರೇಖೆಗಳ ಹಜ್ಜೆಗಳಲ್ಲಿ ಹೊರಳುತ್ತ ॥
ಸಿಲ್ಲದೈದಿಪರರಸುತರಸುತ ।
ಹಳ್ಳಿಯುವರಾಮ್ನಾಯತತ್ತ್ವವ ।
ಬಲ್ಲಿರೆಂದಾ ವನದ ತರುಲತೆಗಳನು ಬೆಸಗೊಳುತ ॥೨೨॥

ಬೇಗೆಯಲಿ ಬಿದ್ದಂತೆ ಜನ ನದಿ ।
ಗಾಗಿ ಹರಿತಂದಾ ಜಲಾಂತದ ।
ಭೋಗಿ ಭೋಗಪರೀತನಾಗಿಹ ಕೃಷ್ಣನನು ಕಂಡು ॥
ನೀಗಿದರು ಜೀವವನು ಜಾತವಿ ।
ಯೋಗದಲಿಗೋ ಗೋಪನಿಕರದ ।
ಸಾಗರದ ಸಂಕ್ರಂದಿತವ ಲಾಲಿಸುತ ಮೂರ್ಛೆಯಲಿ ॥೨೩॥

ಗೋಪಿಯರು ಗೋವಿಂದಮೂರ್ತಿಯ ।
ರೂಪ ಗುಣ ಸೌಂದರ್ಯ ಮಧುರಾ ।
ಳಾಪವನು ನೆನವುತ್ತ ಕಂಬನಿಗಡಲಲಾಳುತ್ತ ॥

ತಾಪಸಸ್ತ್ರೀಯರಾಗಿ ಭುವನಕ |
ಳಾಪಹಾಳಾಯ್ತೆನುತ ಕಂಡಾ |
ಶ್ರೀಪತಿಯ ದುಸ್ಥಿತಿಗೆ ಮರುಗಿದರಂದು ಮರುಕೊಳಿ ||೨೪||

ಬಾಯಬಿಡುತ್ತೈತಂದರಂದಾ |
ಸ್ತ್ರೀಯರಳಲುವ ನಂದಗೋಪಿಯ |
ಕಾಯದಲಿ ಕಾಯವನು ಕೆಡಹಿ ಸಮಾನದುಃಖದಲಿ ||
ಬೇಯಲೊಡಲೊಡನೊಡನೆ ಮೂರ್ಛೋ |
ಪಾಯದಲಿ ಹಲುಬುತ್ತ ಹರಿಯನು |
ಸಾಯಲನುಗೈವುತ್ತಲಿರ್ದುದು ಸಕಲ ಜನನಿವಹ ||೨೫||

ಏಕೆ ಜೀವನವತ್ವ ನಮಗಿ |
ನ್ನೇಕೆ ನಮಗೀ ವಿಭವ ಸಾಕಿ |
ನ್ನೇಕೆ ಗೋಕುಲ ಕೃಷ್ಣನೆಂಬನು ಹೋಗಿ ಸಾವೇಕೆ ||
ಏಕೆ ಲೋಕವಿದಿನ್ನು ಕೃಷ್ಣನ |
ಲೋಕವೇ ನಿಜಲೋಕವೆಮಗೆಂ |
ದಾಕುಳೆಯರಳವಳಿದು ಬಿದ್ದರು ಧರೆಗೆ ಮೂರ್ಛೆಯಲಿ ||೨೬||

ಇರಲು ಕಾಣುತ ಕೃಷ್ಣನಾನಿಜ |
ಶರಣಜನದಾಯಾಸ ಪಾರಂ |
ಪರೆಯನಾ ಗೋಕುಲದ ದುಸ್ಸಹವೆನಿಪ ದುಸ್ಥಿತಿಯ ||
ನರರ ಲೀಲೆಯ ನಾಟಕವನನು |
ಕರಿಸಿ ಮೈಮುರಿದಂತೆ ನಿಮಿಷಾಂ |
ತರಕೆ ಮೈಮುರಿದೆದ್ದನುಗ್ರೋರಗನ ಬಂಧನವ ||೨೭||

ಅಸುರರಿಪು ಮೈಮುರಿಯಲಾ ಶಿಶು |
ಪಶುಗಳಸುಗಳು ಸಹಿತ ಗೋಕುಲ |
ದಸುವ ಮುರಿದೊಡಲೊಳಗೆ ಮಸಗಿದರೊಡನೆ ಮಸಗಿದುದು ||

ನಸುನಗುತ ಹರಿ ನೋಡಲಾನನ |
ವಿಸರ ವಿಕಸಿತವಾಯ್ತು ಜೀವ |
ಪ್ರಸರ ಚೇತನಮೂರ್ತಿ ಹರಿಯೆಂಬುದನು ತೋರ್ಪಂತೆ ||೨೮||

ಜರೆದು ಹರಿ ವ್ಯೈಮುರಿದು ನಿಲೆ ಬಿಗಿ |
ದುರಗನೊಡಲಿನ ಬಂಧವನು ಬಿಡೆ |
ಬಿರಿದು ಬಿಸುಟೆಳಲುತ್ತ ಮಿಗೆ ಕಡುನೊಂದು ಹರಿ ಸಾರ್ದು ||
ಉರುಹುವಂತೀರೇಳು ಜಗವನು |
ಧರಧರದನೂರೊಂದು ಮುಖದಿಂ |
ದುರಗನುರಿಯುಗುಳುತ್ತಲಿರ್ದನು ಹಲವು ಕಂಗಳಲಿ ||೨೯||

ಕೆರಳಿ ನೋಡುತ್ತುರಗಪತಿ ನೋ |
ಹರದ ಹೆಡೆಗಳನೆತ್ತಿ ಪುನರಪಿ |
ಹರಿಯನೊಳಕೊಂಬೊಂದು ಮನದ ಸರೋಷದುಬ್ಬಿನಲಿ ||
ಹರಿದು ಬರೆ ಸಮ್ಮುಖಕೆ ನಾಗನ |
ಕೆರಳಿಸುತ ಬಳಲಿಸುತ ತಪ್ಪಿಸಿ |
ಮುರಿಮುರಿದು ಮುರವೈರಿ ಸುಳಿದಾಡಿದನು ಮಡುವಿನಲಿ ||೩೦||

ಅದ್ದಡೊಡನದ್ದುತ್ತ ಮುರಹರ |
ನೆದ್ದರೊಡನೇಳುತ್ತ ತಿರುಗಿದ |
ಡದ್ವಯದಿಬೆಂಬಳಿಯ ಬಿಡದೋರಂತೆ ತಿರುಗುತ್ತ ||
ಹೊದ್ದಲಾರದೆ ತನ್ನ ಕಟವಾ |
ಯಿದ್ದೆಸೆಯ ನೆಕ್ಕುತ್ತ ಘನತರ |
ರೌದ್ರಮುಖನುರಿಯುಗಳುತಿರ್ದನು ರೋಷಪಾವಕನ ||೩೧||

ಕಾದ ಮಡಕೆಗಳಂತೆಸೆವನಾ |
ಸೋದರದ ವಿಷವೀರ್ಯ ದುಸ್ಸಹ |
ವಾದ ಕಂಗಳ ಸುಯ್ಲ ಹೊಗೆಗಳ ಭೀಕರಾನನದ ||

ಹಾದಿಯನು ಹತ್ತಿಸುತ ಬಹ ಕಾ ।
ಕೋದರೇಂದ್ರನ ಕಡುಹು ತಳವೋ ।
ಲಾದುದೈದಲು ನೆರೆಯದಾ ವೇದಾಂತವಿಶ್ರುತನ ॥೩೨॥

ಬಳಲಿದನು ನಾಗೇಂದ್ರನೊಡಲಾ ।
ರ್ಚಳಿದು ತನ್ನಯ ಮುಂದೆ ರೋಷಾ ।
ಕುಳಿತನೈತರೆ ಮೆಟ್ಟಿ ಹೆಡೆಗಳ ಮೇಲೆ ನಿಂದಿರ್ದು ॥
ತುಳಿದನುರಗನ ಮಸ್ತಕದ ಮಂ ।
ಡಲವನರುಣತರಾಂಘ್ರಿ ಪಂಕಜ ।
ದಳದ ರೇಖೆಗಳೆಸೆಯಲಮರಾವಳಿಯುಘೇಯೆನಲು ॥೩೩॥

ಮೆಟ್ಟಿದನು ಮುನಿದಂತೆ ದೈತ್ಯಘ ।
ರಟ್ಟನುರಗಾಧಿಪನ ಹೆಡೆಗಳ ।
ಥಟ್ಟುಗಳನೊಡನೊಡನೆ ಹೆಡೆವಣಿನಿಕರ ರಂಜಿಸಲು ॥
ಸೃಷ್ಟಿಪಾಲಕರೊಡೆಯನುದರನಿ ।
ವಿಷ್ಟಜನದ ಮಹಾ ಗುರುತ್ವದ ।
ಲಷ್ಟದಿಗಧೀಶ್ವರರು ಭಾಪೆನೆ ವಿವಿಧ ಲೀಲೆಯಲಿ ॥೩೪॥

ತಾಳ ಮದ್ದಳೆ ಶಂಖ ಪಟಹ ಸ ।
ಮೇಳವದ ಸಂಗೀತಸುಮನೋ ।
ಜಾಲವೃಷ್ಟಿಗಳಿಂದ ಗಂಧರ್ವಾಪ್ಸರರ ನಿಕರ ॥
ಮೇಲೆ ಸಂಸ್ತುತಿ ಜಯರವಂಗಳ ।
ಲೋಲಗಿಸುತಾ ಹರಿಯ ನೃತ್ಯದ ।
ಲೀಲೆಗನುಗುಣವೆನಲು ಮುಸುಕಿತು ಗಗನಮಂಡಲವ ॥೩೫॥

ವ್ಯೋಮತಳವೆಡೆಗೆಡಲುವಿಬುಧ ।
ಸ್ತೋಮ ನೆರದೋಲಗಿಸಲಾತ್ಮಾ ।
ರಾಮುರರಸಲನಂತ ಭುವನಾಧಾರನಂಘ್ರಿಗಳ ॥

ಕಾಮರಸದಳತಾಡನದಲು |
ಶ್ಯಾಮ ದರ್ಪವನುಳಿದು ವಿಗತ |
ಕ್ಷೇಮ ಜೀವನನಾದನುರಗಾಧೀಶನಾಕ್ಷಣಕೆ ||೩೬||

ಮೂಗು ಬಾಯಿಗಳಿಂದ ನೆತ್ತರ |
ನಾಗನುದ್ಗಾರಿಸುತ ವಿಹ್ವಲ |
ನಾಗಿ ವಿಶ್ವಾಧೀಶನಂಘ್ರಿಕ್ಷೇಪದುರವಣೆಗೆ ||
ಬಾಗಿ ಹೆಡೆಗಳನಸುವಿಗುಬ್ಬಸ |
ವಾಗಿ ಕಳವಳಿಸಿದನು ದೇಹ |
ತ್ಯಾಗವನು ಮಾಳ್ಪಂತೆ ಮೂರ್ಛಿತನಾದನಡಿಗಡಿಗೆ ||೩೭||

(ಚಾಟುವಿಟ್ಠಲನಾಥ - ಕನ್ನಡ ಭಾಗವತ)



## ೩೮. ಶ್ರೀರಾಮನ ವನವಾಸಪ್ರತಿಜ್ಞೆ

ಮಗನೆ ಬಂದೈ ಇನಕುಲಾಂಬರ |
ಗಗನಮಣಿ ಬಂದೈ ಮನೋರಥ |
ಸುಗುಣ ಬಂದೈ ಸೂನೃತವ್ರತ ಬಂದೆಯ್ಯೆಯೆನುತ ||
ಉಗುವ ನಯನೋದಕದಲರೆದಿ |
ಟ್ಟಗಳ ನೋಟದಲಪ್ಪಿ ಸತ್ಯದ |
ತಗಹಿನವನೀನಾಥನಾ ರಘುನಾಥಗಿಂತೆಂದ ||೧||

ಕಂದ ಕೇಳಿನ್ನಿಣುಗ ಕೇಳಾ |
ನೊಂದ ನೆನೆದರೆ ದೈವ ತಾ ಬೇ |
ರೊಂದ ನೆನೆದುದು ದೈವಗತಿಗೀ ಕೈಕೆಯನು ಸಾರಿ ||
ಎಂದು ಮೇಲುತ್ತರಕೆ ನಾಲಗೆ |
ಬಂದು ಬಂದೊಳಸರಿದು ಮೆಲ್ಲನೆ |
ನಿಂದು ಬಳಿಕೀ ಮಾತನೆಂದನು ಕಲಿಸುಮಂತ್ರಂಗೆ ||೨||

ಈಸುದಿನ ಪರಿಯಂತ ವಿಭವದ |
ವಾಸ ಸೊಬಗಿನ ಸಜ್ಜೆ ಸುಖದ ಸು-
ದೇಶ ಸುಮ್ಮಾನದ ಸುಧಾಂಬುಧಿ ಸಿರಿಯ ನೆಲೆವೀಡು ||
ಲೇಸಿನಾಗರ ಶುಭದ ಬಹುಳಿತ |
ಕೋಶ ಸಂತಸದಿರ್ಕೆ ಸೊಂಪಿನ |
ವಾಸವಾಗಿರ್ದುದು ನಿವಾಸವಿದೆಂದನಾ ಭೂಪ ||೩||

ಅಶುಭದಾಡುಂಬೊಲನು ಕುಹಕದ |
ವಿಷರ ಚಿಂತೆಯ ಸಂತೆ ದುಃಖದ |
ವಸತಿ ದುಗುಡದ ಬೀಡು ದುಮ್ಮಾನದ ಜನಿಸ್ಥಾನ ||
ಅಸುಖದಾರವೆ ಭೇದ ಪುದಿದಾ |
ಯಸದ ಜಾಳಿಗೆ ಜವನ ಮನೆ ರ-
ಕ್ಕಸಿಯ ಮಠವಾಯ್ತಿಂದು ಭವನವಿದೆಂದನಾ ಭೂಪ ||೪||

ಹೇಳಿ ಫಲವೇನೆಲೆ ಸುಮಂತ್ರಕ |
ಮೇಲನರಿಯದೆ ಕೊಟ್ಟೆನೀ ಘಾ- |
ತಾಳಿಗಸುರಾಮರರ ಸಂಗ್ರಾಮದಲಿ ವರವೆರಡ ||
ಬಾಳ ಚಾಚಿದಳಿವಳೆನಗೆ ಗೋ- |
ನಾಳಗೊಡ್ಡಿದೆಯಿಂದು ಬಂದೀ |
ನಾಲಗೆಗೆ ನರಸೊಕ್ಕನಿಕ್ಕಿದಳಿವಳು ತನಗೆಂದ ||೫||

ಬಟ್ಟೆಗುತ್ತರವಿದ್ಯವಱಿಯದೆ |
ಕೊಟ್ಟರುಂಟಲೆ ಮಂತ್ರಿ ಕೇಳ್ ಮನ |
ಮುಟ್ಟಿ ನುಡಿಯಲಿ ಭಾವಿಸದೆ ಸದ್ಧರ್ಮಮಾರ್ಗದಲಿ ||
ಕೊಟ್ಟ ವರವೆರಡುಂಟು ಬೇಡಲು |
ಕೊಟ್ಟರವರಿಂದೀಗ ಹೊದಕುಳಿ |
ಗುಟ್ಟುತಿಹರಿದನರಿಯೆ ನೀ ಕೇಳೆಂದಳಾ ಕೈಕೆ ||೬||

ಬಂದುದೆನಗಪಕೀರ್ತಿ ರಾಜ್ಯವ |
ನೊಂದುವರದಲಿ ಬೇಡಿದೆನು ನಿಜ |
ನಂದನಂಗೊಂದರಲಿ ರಾಮಂಗಡವಿಯೊಡೆತನವ ||
ಇಂದುಮುಖಿಯರ ಸಾಕ್ಷಿಯಲಿ ವೊದ |
ಲೊಂದಿಸಿದರೆನಗೀವರವ ನೀಂ |
ಬಂದ ಬಳಿಕನುಮಾನವಾಗಿದೆ ನಿಮ್ಮ ರಾಯಂಗೆ ||೭||

ಮನುಕುಲದ ರಾಯರಲಿ ಹುಸಿ ಸಂ |
ಜನಿಸದೆಂದೊಳಗರಿಯದೆನ್ನ ಯ |
ತನುಜಗಧಿರಾಜತ್ವವನು ಬೇಡಿದೆನು ನಿಮ್ಮವರ ||
ಇನಿತುಸತ್ಯಕೆ ಮರಳದಲೆಯಿಸ |
ರೆನಗೆ ದೊಡ್ಡಿತೆ ಸಾಕು ರಘುನಂ |
ದನಗೆ ಪಟ್ಟವ ಕಟ್ಟ ನೀಂ ನೆರೆದೆಂದಳಾ ಕೈಕೆ ||೮||

ದೊಡ್ಡಿತೇ ಕ್ಷತ್ರಿಯರಿಗೀ ಕಡು |
ಖಡ್ಡತನವಿರಬೇಕು ರಾಮನಿ |
ಗೊಡ್ಡಿದೀ ಕವಲೊಂದ ತಪ್ಪಿಸೆ ನೆನೆದ ಮತಿ ಲೇಸು ||
ಒಡ್ಡಿದುದಿದಪಕೀರ್ತಿವಧು ಸಲೆ |
ದೊಡ್ಡದರು ರಘುಸಗರರವರೊಳ |
ಗಡ್ಡನಗೆ ಹೊಗದಂತೆ ಮಾಡುವುದುಚಿತ ನಿಮಗಿಂದು ||೯||

ಸುತವಿಯೋಗದಲಳಿಯದಿರನೀ |
ಕ್ಷಿತಿಪ ನೀವಿಂದುಗ್ರಪಾತಿ |
ವ್ರತೆಯರೊಳಗಗ್ಗಳರು ನಿಮ್ಮನು ನೆಮ್ಮುಗಪಕೀರ್ತಿ ||
ಕ್ಷಿತಿಯ ಕುಜನರ ಜಿಹ್ವೆ ಕಡುಕೂ |
ರಿತಿದನರ್ಥದಿನವನಿಪಾಲ |
ಚ್ಯುತಿಗೆ ಮನವನು ಮಾಡುವುದು ನಿಮಗುಚಿತವಲ್ಲೆಂದ ||೧೦||

ಇರಲಿ ನಿಮ್ಮ ಕುಮಾರನೀ ಧರೆ |
ಯರಸುತನದಲಿ ರಾಘವೇಶ್ವರ |
ನಿರಲಿ ಭೂಸುರನಾಗಿ ರಾಜರ್ಷಿತ್ವದಲಿ ಬಳಿಕ ||
ಇರಲಿ ರಘುಪತಿ ನಿಮಗೆ ಮೆರೆವುದು |
ಧರೆಯ ಸಿರಿ ಮನ್ವಾದಿರಾಯರ |
ತರುಣಿಯರು ನಗದಂತೆ ಮಾಡುವುದುಚಿತ ನಿಮಗೆಂದ ||೧೧||

ಬೇಡಿದೀ ವರದಿಂದ ನೃಪತಿಯ |
ಕೂಡಿಕೊಂಡು ವನಪ್ರವಾಸವ |
ಮಾಡುವೆನು ಮರೆಯೇನು ಮನದನುತಾಪವಿನ್ನೇಕೆ ||
ಪೋಡಿ ನಿಮಗಾಗದವೊಲೀ ನೃಪ |
ನಾಡಿ ಹುಸಿ ಹೋಗದಂತೆ ಕೀರ್ತಿಯ |
ಕೋಡಿಸುವೊಡಿದು ಸಮಯವೆಂದು ಸುಮಂತ್ರ ಕೈಮುಗಿದ ||೧೨||

ಬಿಡು ಸುಮಂತ್ರ ಕುಮಂತ್ರಕೃತ್ಯವ |
ತಡೆಸಬೇಡೆನ್ನೊಡೆನೆ ರಘುಗಳ |
ಮಡದಿಯರು ನಗಲೆಮ್ಮನೆಮ್ಮಲಿಯಾದ ದುಷ್ಕೀರ್ತಿ ||
ಒಡರಿಸಲಿ ಪುನರುಕ್ತಿ ನಮ್ಮಯ |
ನುಡಿಗೆ ಹೋಗದಾಂಬಲ್ಲೆವೀ ಜಂ |
ಜಡೆಯತನವನು ಕೆಲಕೆ ಸಾರೆಂದಳು ಸುಮಂತ್ರಕನ ||೧೩||

ಇದು ಯಥಾರ್ಥ ಸುಮಂತ್ರ ನೀನಾ |
ಡಿದ ಸುಭಾಷಿತವೆಂದು ನಂಬಿಹು |
ದನಕೆ ಹೊಲೆ ಹೊಗದಂತೆ ನಡೆಸುವೆವೆಂದು ಮುನಿ ನುಡಿಯೆ ||
ಗದಿಸಬೇಡಿನ್ನಾತನಾಡಿದ |
ತುದಿಯ ಕೊಸರನು ನಿಮ್ಮರಾಯನ |
ವದನದಲಿ ನುಡಿ ಹುಟ್ಟಲೆಂದಳು ಕೈಕೆ ಮುನಿಪತಿಗೆ ||೧೪||

ಐಸಲೇ ನೀ ಜೇಡಿದುದು ತಾ |
ನೇಸುದೊಡ್ಡಿತು ತ್ರಂದೆಯಾಡಿದ |
ಭಾಷೆಗಿದೆಕೋ ಭಾಷೆಯೆನುತಾ ಜನನಿಗಾ ರಾಮ ||
ಲೇಸುಮಾಡಿದಿರನೃತವೆಮ್ಮವ |
ನೀಶನಲಿ ಹೊಗದಂತೆ ಘಟದಲಿ |
ಕಾಸದಿರಿ ಕಲ್ಮಷವ ಗಡ ! ಅನ್ವಯದ ಭೂಷಣವ ||೧೫||

ಭರತನಾಳಲಿ ರಾಜ್ಯವನು ನೀಂ |
ನರಪತಿಯ ಚರಣಾರವಿಂದದ |
ಪರಮಸೇವಾನಿರತರಾಗಿರಿ ನಿಮ್ಮನುಜ್ಞೆಯಲಿ ||
ಚರಿಸುವೆನು ವನವಾಸವನು ಗೋ |
ಚರಿಸುವೆನು ನೀಂ ನುಡಿದ ವರುಷದ |
ಪರಿಗಣನಪರಿಯಂತವೆಂದನು ಕೈಕೆಗಾ ರಾಮ ||೧೬||

ಆ ಸತಿಯನುಪಚರಿಸಿ ಪಿತನಾ |
ಯಾಸವನು ಶ್ರುತಿಧರ್ಮಶಾಸ್ತ್ರವಿ |
ಳಾಸವಚನಾಲಾಪದಿಂದನುತಾಪವನು ಬಿಡಿಸಿ ||
ಆ ಸಕಲ ಲೋಕೈಕ ಲೀಲಾ |
ವಾಸ ತೊರವೆಯ ರಾಯನಾ ವನ |
ವಾಸವನು ಕೈಕೊಂಡನಮರೇಂದ್ರಾದಿಗಳು ನಲಿಯೆ ||೧೭||

(ನರಹರಿ–ತೊರವೆ ರಾಮಾಯಣ)

# ೩೯. ತಿರುಕೊಳವಿನಾಚಿಯ ಪ್ರಳಾಪ

ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳ್ವೈ ಶಂಕರಾ |
ಸುಗುಣನಿಧಿ ನೀನೆನ್ನ ಮೊರೆಗಳನೊರ್ಮ್ಮೆ ಕೇಳ್ವೈ ಶಂಕರಾ ||೧||

ಪರಸಿ ಪಾಡಿ ಮಹೇಶನಿಂದವೆ ಬೇಡಿ ಮುನ್ನಂ ಶಂಕರಾ |
ತುರಗಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂಕರಾ ||೨||

ಎಂತು ಮರೆವೆನೊ ಸವಿಯಸಾಲಿಡುವಮರ್ದು ನಗೆಯಂ ಶಂಕರಾ |
ಕಾಂತಿ ಶೋಭಿಸೆ ಮುದ್ದುವೀರುವ ಮೊಗದ ಬಗೆಯಂ ಶಂಕರಾ ||೩||

ಝಣಝಣಿಸೆ ಕಿರುಗೆಜ್ಜೆ ಕರತಳತಾಳರವಕೆ ಶಂಕರಾ |
ಕುಣಿವ ನಿನ್ನಯ ಬಿನದವೊಪ್ಪುಗುಮೆನ್ನಮನಕೆ ಶಂಕರಾ ||೪||

ಶರಣಪದಪಂಕಜರಜಂಗಳೊಳಾಳದಂತು ಶಂಕರಾ |
ತುರಗಖುರಹತಿಜನಿತಧೂಳಿಯೊಳಳಿದೆಯಿಂತು ಶಂಕರಾ ||೫||

ಎನ್ನನೋವುವನೆಂದು ನಂಬಿರಲಿಂತು ಮಡಿದೈ ಶಂಕರಾ |
ಮುನ್ನಮೆನ್ನಯ ಹರ್ಷವಲ್ಲಿಯ ಕುಡಿಯನುಡಿದೈ ಶಂಕರಾ ||೬||

ನಿನ್ನಳಿವನೀಕ್ಷಿಸಿಯುಮೆನ್ನಸು ಪೋಗದಂದು ಶಂಕರಾ |
ನಿನ್ನೊಳೆನ್ನಯ ಕೂರ್ಮ್ಮೆ ನಿಜಮೆಂತೆನಿಪುದಿಂದು ಶಂಕರಾ ||೭||

ಹರಣದಳಿವಿಂಗಂಜುವೆನೆ ನಿನ್ನಾಣೆ ಮಗನೇ ಶಂಕರಾ |
ತಿರವರಿದು ನಿನ್ನಂದವಾಗದೆ ಪಿಂಗಿದಪನೇ ಶಂಕರಾ ||೮||

(ಷಡಕ್ಷರದೇವ - ರಾಜಶೇಖರವಿಲಾಸ)

# ೪೦. • ವೃಷಕೇತುಯೌವನಾಶ್ವರ ಯುದ್ಧ

ಎಲ್ಲಿ ಹಯಚೋರನಂ ತೋರವನ ನೆತ್ತರಂ |
ಚೆಲ್ಲುವೆಂ ಭೂತಗಣಕೆನುತೆ ಖತಿಯಿಂದೆ ನಿಂ |
ದಲ್ಲಿ ನಿಲ್ಲದೆ ಬರ್ಪ ಯೌವನಾಶ್ವನ ರಥಕೆ
ಮಾರಾಂತು ಕರ್ಣಸೂನು ||

ಬಿಲ್ಲೊಳಂಬಂ ಪೂಡಲಾರು ನೀನೆಲವೊ ನ |
ಮ್ಮಲ್ಲಿ ಸೆಣಸಿದೆ ನೋಡಿದೊಡೆ ಬಾಲಕಂ ನಿನ್ನೊ |
ಳೊಲ್ಲೆನಾಹವಕೆಮ್ಮ ಕುದುರೆಯಂ ಬಿಟ್ಟು ಪೋ
ಗೆಂದೊಡವನಿಂತೆಂದನು ||೧||

ಆರಾದೊಡೇನಶ್ವಮಂ ಬಿಡುವನಲ್ಲ ಮದ |
ವಾರಣಂ ಪಿರಿದಾದೊಡೆಳಸಿಂಗಮಂಜಿ ಕೆಲ |
ಸಾರುವುದೆ ನಿನ್ನ ತನುವಿನ ತೋರದಾಯತಕೆ
ಕಲಿಗಳೆದೆ ಕಾತರಿಪುದೆ ||

ವೀರನಾದೊಡೆ ಕೈದುಮುಟ್ಟುಗಳ ಘೋರಪ್ರ |
ಹಾರಮಂ ತೋರಿಸೀ ಸ್ಥೂಲಸೂಕ್ಷ್ಮಂಗಳ ವಿ |
ಚಾರಮೇಕೆನುತೆ ವೃಷಕೇತು ತೆಗೆದೆಚ್ಚನಾ
ನೃಪನ ಕಾಯಂ ನೋಯಲು ||೨||

ಲೋಕದೊಳ್ತನ್ನೊಳ್ಪೊಣರ್ವ ಭಟರಿಲ್ಲ ನೀ |
ನೇ ಕಲಿ ಕಣಾ ಪಸುಳೆಯೆಂದು ಸೈರಿಸಿದೆ ನಿನ |
ಗಾಕೆವಾಳಿಕೆಯ ಧೀರತ್ವಮುಂಟಾದೊಡದು
ಬಳಿಕೆಮ್ಮ ಪುಣ್ಯಮೆನುತೆ ||

ಆ ಕರ್ಣಪೂರದಿಂ ತೆಗೆದೆಚ್ಚನಾಭೂಪ |
ನೀ ಕರ್ಣಸಂಭವಂ ಕಡಿದನೆಡೆಯೊಳ್ಸರಳ |
ನೇಕಾರ್ಣವಂ ಮೇರೆದಪ್ಪಿತೆನೆ ಮುಸುಕಿದಂ
ಕಣೆಯಿಂದವನ ರಥವನು ||೩||

ಮಾರ್ಗದೊಳ್ಮಾರ್ಗಣಂಗಳನರಿದು ಕರ್ಣಜಂ |
ಕೂರ್ಗಣೆಯ ಕಾರ್ಗಾಲಮಂ ಸೃಜಿಸಲಾ ನೃಪನ |
ತೇರ್ಗೆರಗಿ ಕೂರ್ಗೊಂಡು ಮುತ್ತಿತು ಶರೌಘಮುದ
ನೇನೆಂಬೆನಾಕ್ಷಣದೊಳು ||

ಏರ್ಗಳಿಂದೊಗುಡಿಸೆ ಸಾರಥಿ ಬಳಲ್ದು ಕೆ |
ಸ್ನೀರ್ಗಾರಿ ದೀರ್ಘಶಯನಂ ಗೆಯ್ಯೆ ಕುದುರೆಗ |
ಳ್ನೀರ್ಗೋಲ ಪೋರ್ಗಳಾ ನೃಪನಂಗದೊಳ್ಮಾಣಿ
ಸಿದುವು ಜಾಳಂದ್ರದಂತೆ ||೪||

ಒಡಲೊಳಿಡಿದಸ್ತ್ರಮಂ ಕಿತ್ತೊಡನೆ ಚಿತ್ತದೊ |
ಳ್ಕಿಡಿಯಿಡುವ ಕಡುಗೋಪದುರಿ ಮೈಯ್ಯೊಳಿರದೆ ಪೊರ |
ಮಡುವುದೋ ಕಣ್ಗಳಿಂದೆನೆ ಕೆಂಪಡರ್ದಾಲಿ
ಗಳ್ಭಯಂಕರವಾಗಲು ||

ತುಡುಕಿ ಪಾವಕ ಮಹಾಬಾಣಮಂ ತಿರುವಿನೋ |
ಳ್ತುಡಿಸಿ ಕಿವಿವರೆಗೆ ತೆಗೆದೆಚ್ಚೊಡವನಂದು ಕೈ |
ಗೆಡದೆ ಕರ್ಣಾತ್ಮಜಂ ವಾರುಣಾಸ್ತ್ರಪ್ರಯೋ
ಗದೊಳದಂ ತಂಪಿಸಿದನು ||೫||

ಹವ್ಯವಾಹಾಸ್ತ್ರಮಂ ವಾರುಣಾಸ್ತ್ರದಿ ಗೆಲ್ದು |
ನವ್ಯಮೇಘಾಸ್ತ್ರಮಂ ಕರ್ಣಜಂ ಪೂಡೆ ವಾ |
ಯವ್ಯಾಸ್ತ್ರದಿಂದೆ ಬರಿಕೈದವಂ ತಿಮಿರಾಸ್ತ್ರ
ಮಂ ಜೋಡಿಸಲ್ಕೀತನು ||

ರವ್ಯಸ್ತ್ರದಿಂ ಜಯಿಸಿ ಶೈಲಾಸ್ತ್ರಮಂ ತುಡಲ್ |
ದಿವ್ಯಕುಲಿಶಾಸ್ತ್ರದಿಂ ಮುರಿದಾನ್ನೃಪಾಲನು |
ಗ್ರಿವ್ಯಾಳದಸ್ತ್ರಮಂ ತೆಗೆಯಲ್ಕೆ ಗರುಡಾಸ್ತ್ರ
ದಿಂದಿವಂ ಖಂಡಿಸಿವನು ||೬||

ಪೂತುರೇ ತರುಣ ಮಂತ್ರಾಸ್ತ್ರಪ್ರತೀಕಾರ |
ಚಾತುರ್ಯಮುಂಟಲಾ ನಿನ್ನೊಳಿದ ಲೇಸು ಗೆ |
ಲ್ವಾತುರಮದೇಕೆ ನಿನಗೆನುತವಂ ಕೈದೋರಿ
ಸಲ್ಕಣೆಗಳಾಗಸದೊಳು ||

ಸೇತುವಂ ಕಟಿದವೊಲಿಟ್ಟಣಿಸಲಾಗ ವೃಷ |
ಕೇತು ತರಿದೊಟ್ಟುತಿರಲವರಿರ್ವರೆಡೆಯೊಳ |
ಡ್ಡಾತು ನಿಂದುದು ಬೆಳೆದು ಚಿನಗಡಿದ ಶರಗಿರಿಯ
ದೇನೆಂಬೆನದ್ಭುತವನು ||೭||

ಅವರಿರ್ವರೆಸುಗೆಯೊಳ್ಕಂಡಲಾಕೃತಿಯೊಳೊ |
ಪ್ಪುವ ಕಾರ್ಮುಕಂಗಳುದಯಾಸ್ತಮಯಮಪ್ಪ ಶಶಿ |
ರವಿಬಿಂಬದಾಯತದೊಲಿರೆ ನಡುವಣಂಬುಗ
ಳ್ತನ್ಮರೀಚಿಗಳಂತಿರೆ ||

ಅವಯವದ ಗಾಯದೊಳುಗುವ ರಕ್ತಧಾರೆಗ |
ಳ್ತವೆ ಸಂಜೆಗೆಂಪಿಡಿದ ತೆರದಿಂದೆ ಕಂಗೊಳಿಸೆ |
ಭುವನದೊಳ್ಪೊಸತಾಯ್ತು ಸಂಗ[illegible] ಸಂಧ್ಯಾಗ
ಮವನಂದು ಸೂಚಿಪಂತೆ ||೮||

ಎಚ್ಚು ಕೈಗೆಡನಾ ನೃಪಾಲನಾ ಕಣೆಗಳಂ |
ಕೊಚ್ಚಿ ಬೇಸರಸೀ ವೃಷಧ್ವಜಂ ಬಳಿಕದಕೆ |
ಮೆಚ್ಚಿ ಕೇಳ್ದಂ ಯೌವನಾಶ್ವನೆಲೆಬಾಲ ನೀಂ
ಪಸುಳೆಯಾಗಿರ್ದೊಡೇನು ||

ಕೆಚ್ಚೆದೆಯ ಭಟನಪ್ಪೆ ನಿನ್ನ ಪಡೆದವನಾವ |
ನೆಚ್ಚರಿಸು ನಿಮ್ಮ ಮುತ್ತಯ್ಯನಾರೆನುತೆ ತೆಗೆ |
ದೆಚ್ಚೊಡಾತನ ಕೋಲ್ಗಳಂ ಕಡಿದು ನಸುನಗುತೆ
ಕರ್ಣಸುತನಿಂತೆಂದನು ||೯||

ಪುಯ್ಯಲೊಳ್ಬಂದಳವುದೋರುತಿರ್ಪಾಗ ನಿ |
ಮ್ಮಯ್ಯಮುತ್ತಯ್ಯನಾರೆಂದು ತನ್ನಂ ಕೇಳ್ವೆ |
ಕಯ್ಯರಿದು ಕಾಣಬೇಡವೆ ಕರ್ಣಕಮುಲಹಿತ
ಕರರವರನುಸಿರಬಹುದೆ ||

ಪುಯ್ಯಲಿಳಸಿದ ವಿರೋಧಿಯ ಕಿವಿಗೆ ವಿರಹಿತಂ |
ಗೆಯ್ಯಬೇಕಲ್ಲದೆಲೆ ಮರುಳೆ ಕೋವಿದನಾದೊ |
ಡೊಯ್ಯನೆ ಪರೋಕ್ಷದೊಳ್ತಿಳಿದುಕೊಳ್ವಾಕೆನುತೆ
ವೃಷಕೇತು ತೆಗೆದೆಚ್ಚನು ||೧೦||

ಅಪ್ರತಿಮನಪ್ಪೆ ಬಾಲಕ ಲೇಸುಲೇಸು ಬಾ |
ಣಪ್ರಯೋಗಂಗಳೆನುತೊಂದುಕಣೆವೂಡಿ ಕ |
ರ್ಣಪ್ರದೇಶಕೆ ತೆಗೆದವಂ ಬಿಡಲ್ಕಿವನುರವನುಗಿಯೆ
ಮೈಮರೆದು ಕೂಡೆ ||

ಸಪ್ರಾಣಿಸುತೆ ಕೆರಳ್ದಿನ್ನು ನೋಡೀಸಾಯ |
ಕಪ್ರಭಾವವನೆನುತೆ ದೆಸೆದೆಸೆಗುಗುಳ್ದ ಕನ |
ಕಪ್ರಭೆಯೊಳೆಸೆವ ಸರಳಂ ತೊಟ್ಟು ಕೆನ್ನೆಗೆಳೆ
ದಾರ್ದೆಚ್ಚನಾ ನೃಪನನು ||೧೧||

ಏನೆಂಬೆನರಸ ಕರ್ಣಜನ ಬಾಣದ ಘಾತ |
ಕಾನರೇಂದ್ರಂ ಕರದ ಚಾಪಮಂ ಬಿಟ್ಟು ಮೂ |
ರ್ಛಾನುಗತನಾಗಲಾತನ ಬಲಂ ಮುಂಕೊಂಡು
ಬಂದಿವನ ಮೇಲೆ ಕವಿಯೆ ||

ಆನೆಯಂ ಪೊಯ್ದುಳಿವ ಸಿಂಗಮುಂ ಮುತ್ತುವ ವ್ಯ |
ಗಾನೀಕಮುಂ ಕಂಡೆವಿಂದೆನುತೆ ತುಡುಕಿದನ |
ನೂನ ಶರಜಾಲಮುಂ ಕರಿತುರಗರಥಪದಾ
ತಿಗಳ ಸಂದಣಿ ದಣಿಯಲು ||೧೨||

ವ್ಯೈಮರೆದ ಭೂಪನಂ ಬಿಟ್ಟು ಪಟುಭಟರುಳಿದೆ |
ಪೈ ಮಹಾದೇವೆನುತೆ ಸರಿದರೆಸ್ದೆಸೆಗಿವಂ |
ಕೈಮಾಡಲೊರ್ವರಂ ಕಾಣದೆ ಬಳಲ್ದ ರಿಪು
ಚೇತರಿಸಿಕೊಳ್ಳದಿರಲು ||
ವೈಮನಸ್ಯದೊಳಕಟ ತಪ್ಪಿತೆ ರಣಾಟೋಪ |
ವೈಮೊಗಂ ಬಲ್ಲನೆನುತವನೆಡೆಗೆ ಬಂದಿದೇ |
ನೈ ಮೂರ್ಛೆ ಸಿನಗೆನಲ್ನುಡಿಯದಿರಲೊಯ್ಯನಾ
ನೃಪನುಸಿರನಾರೈದನು ||೧೩||

ಸತ್ಯಮೆನಗುಂಟಾದೊಡಾಂ ಧೀರನಾದೊಡಾ |
ದಿತ್ಯಂಗೆ ಪೌತ್ರನಾದೊಡೆ ತನ್ನ ತಾತಂಗ |
ಪತ್ಯನಾನಾದೊಡೀ ನೃಪತಿ ಜೀವಿಸಲೆನುತೆ
ಕರ್ಣಜಂ ಪಗೆ ಮಾಡುವ ||
ಕೃತ್ಯಮುಂ ಬಿಟ್ಟಾ ಮಹೀಶನ ಬಳಲ್ಕೆಗಾ |
ಚಿತ್ಯಮಾದುಪಚಾರದಿಂದೆ ಸಮರತ್ರಮುಖ |
ರಿತ್ಯಾಗಮುಪ್ಪಂತೆ ಸಂತಯಿಸುತಿರಲಾ ಧ
ರಾಧಿಪಂ ವೈಮುರಿದನು ||೧೪||

ಅರಸ ಕೇಳಾ ಯೌವನಾಶ್ವಸಿಂತಾಗ ವೈ |
ಮುರಿದು ಕಣ್ದೆರೆವಸಿತರೊಳಗಾತನರಿಯದಂ |
ತಿರೆ ಕರ್ಣಸಂಭವಂ ಮುನ್ನ ತಾಸಿರ್ದ ಪ್ರ
ದೇಶಕ್ಕೈತಂದು ಸಿಂದು ||

ಕರದ ಕಾರ್ಮುಕವನೊದರಿಸಿ ದಿವ್ಯಬಾಣಮಂ |
ತಿರುವುತಾರ್ದಿಸುವ ತೆರದಿಂ ಬರಿದೆ ಮುಳಿಸಿನು |
ಬ್ಬರಮಂ ನೆಗಳ್ಚಿ ತನ್ನಾಳ್ತನದ ಬಿಂಕಮಂ
ಕಾಣಿಸಿದನೇವೇಳ್ವೆನು ||೧೫||

ಕೂಡೆ ಕಣ್ದೆರೆದೆದ್ದು ಚೇತರಿಸಿ ದೆಸೆಗಳಂ |
ನೋಡಿ ತನ್ನವರೊರ್ವರಂ ಕಾಣದಿದಿರು ಕೈ |
ಮಾಡದೆ ವೃಥಾಟೋಪಮಂ ನೆಗಳ್ಚುವ ವಿರೋ
ಧಿಯ ವಿಕ್ರಮುವನೆ ಕಂಡು ||

ಮೂಡಿದ ವಿರಕ್ತಿಯಿಂ ನಾಚಿ ಮನದೊಳ್ಪಂತ |
ಪಾಡಿವನೊಳಿನ್ನು ಸಲ್ಲದು ತನಗೆ ಕಾರುಣ್ಯ |
ಕೀಡಾದ ಬಳಿಕದೇತಕೆ ಸಮರವೆನುತವಂ
ಕರ್ಣಜಂಗಿಂತೆಂದನು ||೧೬||

ಮೂಲೋಕದೊಳ್ತನಗೆ ಸಮರಾದ ಮೇದಿನೀ |
ಪಾಲರಂ ಸುಭಟರಂ ಕಾಣೆನೆಂದಾನಿನಿತು |
ಕಾಲಮುಂ ಬೆರೆತಿರ್ದೆನೆನ್ನುವಂ ಗೆಲ್ದು ನೀ
ನತಿಬಲನೆನಿಸಿಕೊಂಡೆಲಾ ||

ಬಾಲ ನೀನಾರವಂ ನಿನ್ನ ಪೆಸರೇನಿಳೆಗೆ |
ಮೇಲೆನಿಸುವೀಹಯಂ ನಿನಗದೇತಕೆ ನಿನ್ನ |
ಶೀಲಕಾಂ ಮಾರುವೋದೆಂ ಕಾದಲೊಲ್ಲೆ ನಿ
ನ್ನಸಿರೆಂದೊಡಿಂತೆಂದನು ||೧೭||

ಆದೊಡೀಜಗಕೆ ಲೋಚನನೆನಿಸಿ ನಭದೊಳೆಸೆ |
ವಾದಿತ್ಯನಿಂದೊಗೆದ ಕರ್ಣನಂ ಕೇಳ್ದರಿವೆ |
ಯಾದೊಡಾತನ ಸುತಂ ಪೆಸರೆನಗೆ ವೃಷಕೇತು
ವಿಂದು ನರಲೀಲೆಗಾಗಿ ||

ಯಾದವರ್ಗರಸಾದ ಕೃಷ್ಣಂ ಭರತಕುಲದ |
ಮೇದಿನೀಶ್ವರ ಯುಧಿಷ್ಠಿರನಿಂ ಮುಖಂ ಗೈಸ |
ಲೀ ದಿವ್ಯಹಯಕೆ ಭೀಮನನಟ್ಟಲವನೊಡನೆ
ಬಂದನದು ಹದನೆಂದನು ||೧೮||

ಎಂದೊಡೆಲೆಕುವರ ನೀನಿನ್ನೆಗಂ ತನ್ನೊಳಿಂ |
ತೆಂದುದಿಲ್ಲಕಟ ಧರ್ಮದ ರೂಪು ತಾನೀತ |
ನೆಂದೆಂಬರಾಯುಧಿಷ್ಠಿರಮಹೀಪತಿಯನವ
ನಿಂ ಮುಖಂ ಗೈಸಿದಪನೆ ||

ಇಂದಿರಾವಲ್ಲಭನ ಪದಕೆ ನಮ್ಮಾಹಯವ|
ನೊಂದನೊಯ್ವರೆ ತನ್ನ ಸರ್ವಸ್ವಮಂ ತಾನೆ |
ತಂದು ಹರಿಪದಕರ್ಪಿಸುವೆನೆಲ್ಲಿ ಭೀಮನಂ
ತೋರೆಂದನಾ ಭೂಪನು ||೧೯||

ಎನಲಚ್ಯುತನ ಪದಕೆ ಸರ್ವಸ್ವಮೊಪ್ಪಿಸುವ |
ಮನಮುಳ್ಳನಾವನಾತಂಗೆ ಪಾಂಡವರೊಳೆರ |
ವಿನಿತಿಲ್ಲಮಾ ಪಾರ್ಥಿವರ ಸಖ್ಯಮಾವಂಗೆ
ದೊರೆವುದಾತಂಗೆ ಹರಿಯ ||

ಮುನಿಸಿಲ್ಲಮದರಿಂದೆ ಭೀಮನಂ ಕಾಣ್ಬುದೀ |
ಗನುನಯಂ ಸಿನಗೆಂದು ಕರ್ಣಜಂ ನುಡಿದೊಡಾ |
ಜನಪನುತ್ಸವದೊಳಳವಡಿಸಿದಂ ತನ್ನ ಮಣಿ
ರಥವನಿರ್ವರುಮ್ಮೈದಲು ||೨೦||

ಮಾನವಾಧೀಶ ಕೇಳ್ಬಳಿಕ ವೃಷಕೇತು ಸು |
ಮ್ಮಾನದಿಂದಾ ಯೌವನಾಶ್ವಭೂಪತಿಗೆ ಪವ |
ಮಾನಸುತನಂ ಕಾಣಿಸುವೆನೆಂಬ ತವಕದಿಂ
ದಾತನ ವರೂಥದೊಳಗೆ ||

ಮಾನದಿಂದಡರ್ದವಂವೆರಸಿ ನಡೆತರುತಿರೆ ವಿ |
ಮಾನದಿಂ ನೋಡುವನಿಮಿಷನಿಕರವಿಾತನ ಸ |
ಮಾನದವರಿಲ್ಲೆಂದು ಕೊಂಡಾಡುತಾಗಸದೊ
ಳರಲಸರಿಯಂ ಕರೆದರು ||೨೧||

(ಲಕ್ಷ್ಮೀಶ - ಜೈಮಿನಿ ಭಾರತ)

## ೪೧. ಚಂಡಿಯ ಕಥೆ

ಆಲಿಸರ್ಜುನ ಮುನ್ನ ವಿಪ್ರನುಂಟೊರ್ವನು |
ದ್ದಾಲಕಾಖ್ಯಂ ತಿಳಿದನಖಿಳಶಾಸ್ತ್ರಂಗಳಂ |
ಮೇಲೆ ವೈವಾಹದೊಳ್ವಧುವಾದಳಾತಂಗೆ
ಚಂಡಿಯೆಂಬಾಕೆ ಬಳಿಕ ||
ಕಾಲಕಾಲದ ಜಪಾನುಷ್ಠಾನ ಪೂಜೆಗಳಿ |
ಗಾಲಸ್ಯಮಂ ಮಾಡದೆನ್ನ ಪರಿಚರ್ಯೆಗನು |
ಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು
ನೀನೆಂದೊಡಿಂತೆಂದಳು ||೧||

ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ |
ಗೊಳ್ಳದಿರ್ಪರಿಚರ್ಯೆ ಮನೆವಾಳ್ತೆಯೆಂದೆಂಬ |
ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂ
ದಾ ಚಂಡಿ ಚಂಡಿಪೋರೆ ||
ಮುಳ್ಳಿಡಿದ ಮರನೇರಿದಂತಾದುದಿಹಪರಕಿ |
ದೊಳ್ಳಿತಾದಪುದೆ ಬಂದುದು ತಪೋಹಾನಿಯೆಂ |
ದಳ್ಳಿಯುಂ ಕೋಲ್ಗೊಂಡ ತೆರದೊಳುದ್ದಾಲಕಂ
ಚಿಂತಿಪಂ ಪ್ರತಿದಿನದೊಳು ||೨||

ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿ |
ಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ |
ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊ
ಡವಳ ಪ್ರತಿಕೂಲತೆಯನು ||
ಅಂತರಿಸದೆಲ್ಲಮಂ ಪೇಳ್ದೊಡವನಿದಕೆ ನೀಂ |
ಮುಂತೆ ವಿಪರೀತಮಂ ಮಾಡಲಾದಪುದೆಂದು |
ಸಂತಾಪಮಂ ಬಿಡಿಸಿ ಬೀಳ್ಕೊಂಡವಂ ತೀರ್ಥ
ಯಾತ್ರೆಗೈದಿದನಿತ್ತಲು ||೩||

ಉದ್ದಾಲಕಂ ಬಳಿಕ ತನ್ನ ಮಂದಿರದೊಳಿರು |
ತಿದ್ದ ಸಮಯಕೆ ಪಿತೃಶ್ರಾದ್ಧ ದಿವಸಂ ಬಂದೊ |
ಡೆದ್ದು ಚಂಡಿಯೊಳೆಲೆಗೆ ನಾಳೆ ಪೈತೃಕಮದಂ
ನಾಡಿದಲ್ಲದೆ ಮಾಡೆನು||
ಕದ್ದು ತಹೆನಧಮ ಧಾನ್ಯವ್ರೀಹಿ ಶಾಕಮಂ |
ಪೊದ್ದಲೀಯೆಂ ಶುದ್ಧ ವಸ್ತುಗಳನೊಂದುಮಂ |
ತದ್ದಿನಕೆ ಮರುದಿವಸದೊಳ್ಪೇಳ್ದು ಬಹೆನಪಾ
ತ್ರಕ್ಕೆಂದೊಡಿಂತೆಂದಳು ||೪||

ನಾಳೆ ಮಾಡಿಸುವೆನಾಂ ಪೈತೃಕವನುತ್ತಮದ |
ಶಾಲಿಧಾನ್ಯವ್ರೀಹಿ ಶಾಕಮಂ ಕೊಂಡು ಬಹೆ |
ನಾಲಯುವನತಿಶುದ್ಧವಾದ ವಸ್ತುಗಳಿನ
ಲ್ಲದೆ ಕೂಡೆನಲ್ಲಿಯಿಂದೆ ||
ಪೇಳಿಸುವೆನಂದಿನ ದಿನದ ಮೊದಲ ರಾತ್ರಿಯೆ ವಿ |
ಶಾಲಗುಣಸಂಪನ್ನ ವೇದಪಾರಂಗತ ಸು |
ಶೀಲರಹ ಸತ್ಪಾತ್ರದವನಿಯಮರರ್ಗೆನ
ಲ್ಚಂಡಿಗವನಿಂತೆಂದನು ||೫||

ಆದೊಡೆ ಕುತುಪಕಾಲವಂ ಬಿಡುವೆನರ್ಚನೆಯೊ |
ಳಾದರಿಸೆನಾಂ ಬಂದ ವಿಪ್ರರಂ ಪಾಕದ ನ |
ವೋದನ ಸುಪಾಯಸ ಗುಡಾಜ್ಯ ಮಧು ತೈಲ ಪೃಥು
ಭಕ್ಷ್ಯ ಭೋಜ್ಯಾದಿಗಳನು||

ಸ್ವಾದು ಫಲ ಶರ್ಕರ ವಿನುತ ಶಾಕ ನಿರ್ಮಲ ಪ|
ಯೋದಧಿಗಳಂ ಸಕುತ್ಸಿತವಾಗದಂತೆ ಸಂ |
ಪಾದಿಸಿ ಪಿತೃಶ್ರಾದ್ಧಮಂ ಮಾಡಿ ವಸ್ತ್ರದ
ಕ್ಷಿಣೆಗಳಂ ಕೊಡೆನೆಂದನು ||೬||

ಎಂದೊಡೆ ಕುತುಪ ಕಾಲಮಂ ಮೀರಲೀಯೆನಾಂ |
ಬಂದ ವಿಪ್ರರನಾದರಿಸಿ ಪೂಜೆಗೆಯ್ವುದಿರೆ |
ನಿಂದೊಲ್ಲೆನೆಂದೊಕ್ಕಣಿಸಿದಿನಿತನೆಲ್ಲಮಂ
ಸಂಪಾದಿಸದೆ ಮಾಣೆನು ||

ತಂದಮಲ ವಸ್ತ್ರತಾಂಬೂಲ ವರ ದಕ್ಷಿಣೆಗ |
ಳಿಂದೆ ಸತ್ಕರಿಸಿ ಕಳುಹಿಸದೆ ಬಿಡೆನೆನುತೆ ನಲ |
ವಿಂದೊದವಿಸಿದಳಖಿಲ ಸದ್ದ್ರವ್ಯಮಂ ಬಳಿಕ
ಚಂಡಿ ಪಾಕಂಗೈದಳು ||೭||

ಕಂಡನೀ ತೆರನನುದ್ದಾಲಕಂ ಸಂತಸಂ |
ಗೊಂಡು ಮನದೊಳ್ಪಿರಿಗೆ ತಾನೊಪ್ಪದವನಾಗಿ |
ಚಂಡಿ ಪೇಳಿದವೊಲಾ ಶ್ರಾದ್ಧಮಂ ಮಾಡಿ ಸಂ
ಪ್ರೀತಿಯಿಂ ವಿಪರೀತದ ||

ತೊಂಡುತೊಳಸಂ ಮರೆದು ಕರ್ಮಾಂಗವಾಗಿರ್ದ |
ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡು |
ದ್ದಂಡದಿಂದೆತ್ತಿ ಬೀದಿಗೆ ಬಿಸುಡಲಾ ದ್ವಿಜಂ
ರೋಷಭೀಷಣನಾದನು ||೮||

ಎಲೆಗೆ ನಿನ್ನೊಡನೆ ನಾನೇಂ ಹರಿಯ ಹೋರುವೆಂ |
ಖಲತನಕಲಸಿದೆನಾನವರಿಯಾಗಿ ಹೋಗೆಂದು |
ಸಲೆ ಮುಳಿದು ಶಾಪವಂ ಕೊಟ್ಟು ಕಾರುಣ್ಯದಿಂ
ದಾದ್ವಿಜಂ ಕೂಡೆ ತಿಳಿದು ||
ಕೆಲವು ಕಾಲಕೆ ನಿನ್ನೊಳಧ್ವರಹಯಂ ಬಂದು |
ನಿಲಲರ್ಜುನಂ ಬಿಡಿಸಿದೊಡೆ ಮೋಕ್ಷಮಹುದೆಂದು |
ತೊಲಗಿದಂ ಸಂನ್ಯಾಸಕವನತ್ತಲವನಿಯೊ
ಳ್ಕಲ್ಲಾದಳಿಪಳಿತ್ತಲು ||೯||

(ಲಕ್ಷ್ಮೀಶ ಜೈಮಿನಿ ಭಾರತ)



## ೪೨. ಸೀತೆಯ ದುಃಖದಲ್ಲಿ ಪ್ರಕೃತಿಯ ಸಹಾನುಭೂತಿ

ಎಲೆ ವನಸ್ಥಳಗಳಿರ ವೃಕ್ಷಂಗಳಿರ ಮೃಗಂ |
ಗಳಿರ ಕ್ರಿಮಿಕೀಟಂಗಳಿರ ಪಕ್ಷಿಗಳಿರ ಲತೆ |
ಗಳಿರ ತೃಣಗುಲ್ಮಂಗಳಿರ ಪಂಚಭೂತಂಗ
ಳಿರ ದೆಸೆಗಳಿರ ಕಾವುದು ||
ಎಲೆ ಧರ್ಮದೇವತೆ ಜಗಜ್ಜನನಿ ಜಾಹ್ನವಿಯೆ |
ಸಲಹಿಕೊಂಬುದು ತನ್ನ ಮಾತೆಯಂ ಜಾನಕಿಯ |
ನೆಲೆ ತಾಯೆ ಭೂದೇವಿ ನಿನ್ನ ಮಗಳಿಹಳೆಂದು
ಸೌಮಿತ್ರಿ ಕೈಮುಗಿದನು ||೧||

ಮಾಳ್ಕೆಯಿನ್ನಾವುದಿಬ್ಬಗಿಯಾಗಿ ತನ್ನೊಡಲ |
ಸೀಳ್ಕೆಡಹ ಬೇಡವೆ ಧರಿತ್ರಿಯೊಳ್ನಿಷ್ಠುರದ |
ಬಾಳ್ಕೆಯಂ ಸುಡಲೆನುತ ದೇವಿಯಂ ಬಲವಂದು
ಲಕ್ಷ್ಮಣಂ ನಮಿಸಿ ಬಳಿಕ ||
ಬೀಳ್ಕೊಂಡು ನಡೆಯಲ್ಕೆ ಹಿಂದುಹಿಂದಕೆ ಮನಂ |
ನೀಳ್ಕುಳಿಗೊಳಲ್ಕೆಂದುಮುಗಲದಣ್ಣನಕಡೆಗೆ |
ದೂಳ್ಕಾಯದೊಳ್ಪತ್ತಿ ಪೊರಳ್ವ ಸೀತೆಯ ಕಡೆಗೆ
ತೂಗುಯ್ಯಲೆಯೊಲಾದನು ||೨||

ತಾಯನೆಳಗರು ಬಿಚ್ಚುವಂತೊಯ್ಯನೊಯ್ಯನ |
ತ್ಯಾಯಾಸದಿಂದಗಲ್ದಮರ ನದಿಯಂ ದಾಂಟಿ |
ರಾಯ ಕೇಳ್ ದುಃಖಾರ್ತನಾಗಿ ಸೌಮಿತ್ರಿಸಾ
ಗಿದನತ್ತಲವಳಿತ್ತಲು ||
ಬಾಯಾರಿ ಕಂಗೆಟ್ಟು ಲಕ್ಷ್ಮಣನ ತಲೆ ಮಸುಳ|
ಲಾಯೆಂದೊರಲ್ದು ಭಯ ಶೋಕದಿಂದಸವಳಿದು |
ಕಾಯುಮಂ ಮರೆದವನಿಗೊರಗಿದಳ್ಮೂಲಮಂ
ಕೊಯ್ದಿಳಿಯ ಬಳ್ಳಿಯಂತೆ ||೩||

ಅರಸ ಕೇಳಲ್ಲಿರ್ದ ಪಕ್ಷಿ ಮೃಗ ಜಂತುಗ |
ಳ್ಧರಣಿಸುತೆಯಂ ಬಳಸಿ ನಿಂದು ಮೈಯುಡುಗಿ ಜೋ |
ಲ್ದಿರದೆ ಕಣ್ಣೀರ್ಗರೆದು ನಿಜ ವೈರಮಂ ಮರೆದು
ಪುಲ್ಮೇವುಗಳನೆ ತೊರೆದು ||
ಕೊರಗುತಿರ್ದುವು ಕೂಡೆ ವೃಕ್ಷಲತೆಗಳ್ಬಾಡಿ |
ಸೊರಗುತಿರ್ದುವು ಶೋಕ ಭಾರದಿಂ ಕಲ್ಗಳುಂ |
ಕರಗುತಿರ್ದುವು ಜಗದೊಳುತ್ತಮರ ಹಾನಿಯಂ
ಕಂಡು ಸೈರಿಸುವರುಂಟೆ ||೪||

ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿಲ್ |
ಬೆರೆಯಲೊಲ್ಲವು ಕೋಕಿ ನಡೆಯಲೊಲ್ಲವು ಹಂಸೆ |
ಕರೆಯಲೊಲ್ಲವು ಪಿಕಂ ನುಡಿಯಲೊಲ್ಲವು ಶುಕಂ
ನಲಿಯಲೊಲ್ಲವು ಚಕೋರಿ ||
ನೆರೆಯಲೊಲ್ಲವು ಹರಿಣಿಯೊಲೆಯಲೊಲ್ಲವು ಕರಿಣಿ |
ಪೊರೆಯಲೊಲ್ಲವು ಚಮರಿ ಮೆರೆಯಲೊಲ್ಲವು ಸಿಂಗ |
ಮರರೆ ಜಾನಕಿಯ ಶೋಕಂ ತಮ್ಮದೆಂದಾಕೆ
ಯಂಗಮಂ ನೋಡಿ ನೋಡಿ ||೫||

ಬೀಸಿದುವು ಚಾಲದೊಳ್ತವುರಿಗಳ್ತಮರಮಂ |
ಪಾಸಿದುವು ಕರಿಗಳೆಳದಳಿರ ಮೃದು ತಳ್ಪಮಂ |
ಸೂಸಿದುವು ಸಾರಸಂಗಳ್ತಮ್ಮ ಗರಿಗಳಂ
ತೋದು ತಂದಂಬುಗಳನು ||
ಆ ಸಿರಿ ಮೊಗಕ್ಕೆ ಬಿಸಿಲಾಗದಂತಾಗಸದೊ |
ಳೋಸರಿಸದಂಚೆಗಳೆರಂಕೆಯನಗಲ್ಚಿ ನೆಳ |
ಲಾಸೆಗೆಯ್ದುವು ರಾಘವನ ರಾಣಿ ದುಃಖಸಂ
ತಪ್ತೆಯಾಗಿರುತಿರಲ್ಕೆ ||೬||

ಸುರ ನದಿಯ ತೆರೆತೆರೆಯ ನಡುನಡುವೆ ಬಿದ್ದೆದ್ದು |
ಬರಲಾರದಿದೊರ್ಡಂ ಮತ್ತೆ ಗಂಗೆಯೊಳಲ |
ರ್ದರವಿಂದಗಂಧದತಿಭಾರಮಂ ಪೊರಲಾರ
ದಿದೊರ್ಡಂ ಧರಣಿ ಸುತೆಯ ||
ಪರಿತಾಪಮಂ ತವಿಸದಿರಬಾರದೆಂದು ತರ |
ಹರದೊಳೊಯ್ಯೊಯ್ಯನೆಯ್ತಂದು ಬೀಸಿತು ಸುಖ |
ಸ್ಪರುಶವಾತಂ ಜಗದೊಳುಪಕಾರಿಯಾದವಂ
ತನ್ನ ನೋವಂ ನೋಳ್ಪನೆ ||೭||

ಪೃಥಿವಿಯಾತ್ಮಜೆ ಬಳಿಕ ಚೇತರಿಸಿ ತನಗಿನ್ನು |
ಪಥವಾವುದೆಂದು ದೆಸೆದೆಸೆಗಳಂ ನೋಡಿ ಸಲೆ |
ಶಿಥಿಲವಾದವಯವದ ದೂಳಿಡಿದ ಮೈಯ ಬಿಡು
ಮುಡಿಯ ವಿಕೃತಿಯನೆಣಿಸದೆ ||
ಮಿಥಿಳೇಂದ್ರವಂಶದೊಳ್ಜನಿಸಿ ರಘುಕುಲದ ದಶ |
ರಥ ನೃಪನ ಸೊಸೆಯಾಗಿ ತನಗೆ ಕಟ್ಟಡವಿಯೊಳ್ |
ವ್ಯಥಿಸುವಂತಾಯ್ತುಕಟ ವಿಧಿಯೆಂದು ಹಲುಬಿದಳ್
ಕಲ್ಮರಂ ಕರಗುವಂತೆ ||೮||

(ಲಕ್ಷ್ಮೀಶ - ಜೈಮಿನಿ ಭಾರತ)

## ೪೨. ಸೋಮೇಶ್ವರ ನೀತಿ

ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ |
ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂ ನೋಡುತಂ ||
ಕೆಲವಂ ಸಜ್ಜನ ಸಂಗದಿಂದಲರಿಯಲ್ ಸರ್ವಜ್ಞನಪ್ಪಂ ನರಂ |
ಪಲವುಂ ಪಳ್ಳ ಸಮುದ್ರಮೈ ಹರ ಹರಾ ಶ್ರೀ ಚೆನ್ನ ಸೋಮೇಶ್ವರಾ ||೧||

ರವಿಯಾಕಾಶಕೆ ಭೂಷಣಂ ರಜನಿಗಾ ಚಂದ್ರಂ ಮಹಾಭೂಷಣಂ |
ಕುವರಂ ವಂಶಕೆ ಭೂಷಣಂ ಸರಸಿಗಂಭೋಜಾತಗಳ್ ಭೂಷಣಂ ||
ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ |
ಕವಿಯಾಸ್ಥಾನಕೆ ಭೂಷಣಂ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೨||

ಹಿತವಂ ತೋರುವನಾತ್ಮಬಂಧು ಪೊರೆವಾತಂ ತಂದೆ ಸದ್ಧರ್ಮದಾ |
ಸತಿಯೇ ಸರ್ವಕೆ ಸಾಧನಂ ಕಲಿಸಿದಾತಂ ವರ್ಣಮಾತ್ರಂ ಗುರು ||
ಶ್ರುತಿ ಮಾರ್ಗಂ ಬಿಡದಾತ ಸುವ್ರತಿ ಮಹಾ ಸದ್ವಿದ್ಯೆಯೇ ಪುಣ್ಯದಂ |
ಸುತನೇ ಸದ್ಗತಿದಾತನೈ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೩||

ಪ್ರಜೆಯಂ ಪಾಲಿಸಬಲ್ಲೊಡಾತನರಸಂ ಕೈಯಾಸೆಯಂ ಮಾಡದಂ |
ನಿಜ ಮಂತ್ರೀಶ್ವರ ತಂದೆ ತಾಯ ಸಲಹಲ್ ಬಲ್ಲಾತನೇ ಧಾರ್ಮಿಕಂ ||
ಭಜಕಂ ದೈವದ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ |
ದ್ವಿಜನಾಚಾರತೆಯುಳ್ಳವಂ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೪||

ಸರಿಯೇ ಸೂರ್ಯಗೆ ಕೋಟಿ ಮಿಂಚುವುಳುಗಳ್ ನಕ್ಷತ್ರವೆಷ್ಟಾದೊಡಂ |
ದೊರೆಯೇ ಚಂದ್ರಗೆ ಜೀವರತ್ನಕೆಣೆಯೇ ಮಿಕ್ಕಾದ ಪಾಷಾಣಗಳ್ ||
ಉರಗೇಂದ್ರಂಗೆ ಸಮಾನವೊಳ್ಳೆಯೆ ಸುಪರ್ಣಂಗೀಡೆ ಕಾಕಾಳಿ ಸ |
ಕ್ಕರೆಗುಪ್ಪಂ ಸರಿಮಾಳ್ಪರೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೫||

ಧರಣೀಶಂ ಧುರಧೀರನಾಗೆ ಧನಮುಳ್ಳಂ ತ್ಯಾಗಿಯಾಗಲ್ ಕವೀ |
ಶ್ವರ ಸಂಗೀತದಿ ಜಾಣನಾಗೆ ಸುಕಲಾಪ್ರೌಢಂಗಿರಲ್ ಪ್ರೌಢವೆಣ್ ||
ಬರೆವಂ ಧಾರ್ಮಿಕನಾಗೆ ಮಂತ್ರಿ ಚತುರೋಪಾಯಂಗಳಂ ಬಲ್ಲೊಡಂ |
ದೊರೆವೋಲ್ ಚಿನ್ನಕೆ ಸೌರಭಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ||೬||

ಉಣದಿರ್ಪಾ ಧನಮಿರ್ದೊಡೇನು ಸುತನಿರ್ದೇಂ ಮುಪ್ಪಿನಲ್ಲಾಗದಾ |
ಒಣಗಲ್ಪೈರಿಗೆ ಬಾರದಿರ್ದ ಮಳೆ ತಾಂ ಬಂದೇನದಾಪತ್ತಿನೊಳ್ ||
ಮಣಿದುಂ ನೋಡದ ಬಂಧುವೇತಕೆಣಸಲ್ ಕಾಲೋಚಿತಕ್ಕೈದಿದಾ |
ತೃಣವೇ ಪರ್ವತವಲ್ಲವೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೭||

ಸುಡು ಸೂಪಂ ಘೃತಮಿಲ್ಲದೂಟವ ಪರಾನ್ನಾಪೇಕ್ಷೆಯಾ ಜಿಹ್ವೆಯಂ|
ಸುಡು ದಾರಿದ್ರ್ಯದ ಬಾಳ್ಕೆಯಂ ಕಲಹ ಕೋಪಂ ಮಾಳ್ಪ ಸಂಗಾತಿಯಂ ||
ಸುಡು ತಾಂಬೂಲವಿಹೀನ ವಕ್ತ್ರವ ಪರಸ್ತ್ರೀ ನೋಡುವಾ ಕಣ್ಗಳಂ |
ನುಡಿದುಂ ತಪ್ಪುವ ರಾಜನಂ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೮||

ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ |
ಮರಗಳ್ ಪುಟ್ಟವೆ ಪುಷ್ಪವೊಂದು ಬಳಲಲ್ ಭೃಂಗಕ್ಕೆ ಪೂವಿಲ್ಲವೇ ||
ನಿರುತಂ ಸತ್ಕವಿಗೊರ್ವ ಗರ್ವಿ ಪುಸಿಯುತ್ತಂ ಲೋಭಿಯಾಗಲ್ ನಿಜಂ|
ಧರೆಯೊಳ್ ದಾತರು ಪುಟ್ಟರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ||೯|

ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ ಗಂಡ ಹೆಂ।
ಡಿರನತ್ಯುಗ್ರದಿ ಶಿಕ್ಷಿಸಲ್ ಪ್ರಜೆಗಳಂ ಭೂಪಾಲಕಂ ಬಾಧಿಸಲ್ ॥
ತರುವೇ ಪಣ್ಗಳ ಮೆಲ್ಲೆ ಮಾತೆ ವಿಷಮಂ ಪೆತ್ತರ್ಭಕಂಗೂಡಿಸಲ್ ।
ಹರ ಕೊಲ್ಲಲ್ ಪರಕಾಯ್ವನೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥೧೦॥

ಗಿಡವೃಕ್ಷಂಗಳಿಗಾರು ನೀರನೆರೆವರ್ ನಿತ್ಯಂ ಮಹಾರಣ್ಯದೊಳ್ ।
ಕಡುಕಾರ್ಪಣ್ಯದಿ ಕೇಳ್ವವೇ ಶಿಖಿ ಜಲೋರ್ವೀ ಮಾರುತಾಕಾಶಮಂ ॥
ಮೃಡ ನೀನಲ್ಲದದಾರು ಕಾಯ್ವರು ಜಗದ್ರಕ್ಷಾಕರಂ ನೀನೆಲೈ ।
ಕೊಡುವರ್ ಕೊಂಬರು ಮರ್ತ್ಯರೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥೧೧॥

ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧ ಬೀಜಂ ಕೆಲಂ ।
ಪಿಡಿದುಂ ಪೆರ್ಮರನಾಗದೇ ಎಳಗರುಂ ಎತ್ತಾಗದೇ ಲೋಕದೊಳ್ ॥
ಮಿಡಿ ಪಣ್ಣಾಗದೆ ದೈವದೊಲ್ಮೆಯಿರಲಾ ಕಾಲಾನುಕಾಲಕ್ಕೆ ತಾಂ ।
ಬಡವಂ ಬಲ್ಲಿದನಾಗನೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥೧೨॥

ಚಿಗುರೆಂದುಂ ಮೆಲೆ ಬೇವು ಸ್ವಾದುವಹುದೇ ಚೇಳ್ ಚಿಕ್ಕದೆಂದಳ್ಕರಿಂ ।
ತೆಗೆಯಲ್ ಕಚ್ಚದೆ ಪಾಲನೂಡಿ ಫಣಿಯಂ ಸಾಕಲ್ಕೆ ವಿಶ್ವಾಸಿಯೇ ॥
ಖಗಮಂ ಸಾಕುವೆನೆಂದು ಗೂಗೆ ಮರಿಯಂ ಸಂಪ್ರೀತಿಯಿಂದೋವರೇ ।
ಪಗೆಯಂ ಬಾಲಕನೆಂಬರೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥೧೩॥

ಸುಳಿದಾ ಹೊಮ್ಮೃಗವೆಯ್ದೆ ಸೀತೆಯ ಖಳಂ ಕೊಂಡೊಯ್ದು ತಾಂಬಾಳ್ದನೇ।
ಇಳಿದಂಭೋಧಿಯ ಬಾಳ್ದನೇ ತನುಸನಂದಾವ್ನಾಯವಂ ಕದ್ದು ತಾ ॥
ತಲೆಯಂ ಕಟ್ಟರೆ ಕಂಚವಾಳ ಮರದೊಳ್ ಶೂದ್ರೀಕ ವೀರಾಖ್ಯನಂ ।
ಕಳವೇಂ ಕೊಲ್ಲದೆ ಕಾಯ್ವುದೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥೧೪॥

ಬಡಿಕೋಲಂ ಸಮಮಾಡಲಕ್ಕುಮರೆಯೊಳ್ ಕೂಪಂಗಳಂ ತೋಡಲ ।
ಕ್ಕೆಡಿದುಕ್ಕಂ ಮೃದುಮಾಡಲಕ್ಕು ಮಳಲೊಳ್ ತೈಲಂಗಳಂ ಹಿಂಡಲ ॥
ಕ್ಕಡವೀ ಸಿಂಗವ ತಿದ್ದಲಕ್ಕು ಕರೆಯಲ್ ಬಕ್ಕುಗ್ರದ ವ್ಯಾಘ್ರಮಂ ।
ಕಡುಮೂರ್ಖಂ ಹಿತಕೇಳ್ವನೇ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥೧೫॥

ಅತಿಗಂಭೀರನುದಾರ ಧೀರನು ಮಹಾ ಸಂಪನ್ನ ಸತ್ಯಾತ್ಮನೂ |
ರ್ಜಿತ ನಾನಾ ಲಿಪಿ ಭಾಷೆಯೊಳ್ ಪರಿಚಿತಂ ಲಂಚಕ್ಕೆ ಕೈನೀಡದಂ ||
ವ್ರತಿ ಸದ್ಧರ್ಮ ವಿಚಾರಶಾಲಿ ಚತುರೋಪಾಯಂಗಳಂ ಬಲ್ಲವಂ |
ಪತಿಕಾರ್ಯಂ ವರ ಮಂತ್ರಿಯೈ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೧೬||

ಅರೆಯುಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲವೇ |
ಕಿರಿದಾಗಿರ್ದೊಡದೇನುಪಾಯಪರನೊರ್ವಂ ಕೋಟಿಗೀಡಕ್ಕು ಹೆ ||
ಮ್ಮರನಿರ್ದೀನದರಿಂದಲೆತ್ತಬಹುದೇ ಬಲ್ಭಾರವಂ ಸನ್ನೆ ಸಾ ||
ವಿರ ಕಾಲಾಳಿನ ಸತ್ವವೈ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೧೭||

ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನವಂ |
ಬಿಡಬೇಕೈ ಧನಲೋಭ ಬಂಧುಜನರೊಳ್ ದುಷ್ಪಾತ್ರರೊಳ್ ಗೋಷ್ಠಿಯಂ |
ಇಡಬೇಕೀಶ್ವರನಲ್ಲಿ ಭಕ್ತಿರಸಮಂ ವಿಶ್ವಾಸಮಂ ಸ್ವಾಮಿಯೊಳ್ |
ಇಡಬೇಕಿದ್ದುಣಬೇಕೆಲೈ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೧೮||

ಪೊರಬೇಡಂಗಡಿ ಸಾಲ ಪೂರ ಹೊಣೆಯಂ ಪಾಪಂಗಳಂ ನಿಂದೆಯಂ |
ಮರೆಬೇಡಾತ್ಮಜ ಸತ್ಕಳತ್ರ ಸಖರೊಳ್ ನ್ಯಾಯಂಗಳೊಳ್ ಸತ್ಯದೊಳ್ ||
ಸೆರೆಬೇಡರ್ಭಕ ಪಕ್ಷಿವೃದ್ಧ ತರುಣೀ ಗೋವಿಪ್ರದೀನರ್ಕಳಂ |
ತೆರಬೇಡೊತ್ತೆಗೆ ಬಡ್ಡಿಯಂ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೧೯||

ಕುರುಡಂ ಕನ್ನಡಿಯಂ ಕವೀಂದ್ರರ ಮಹಾದುರ್ಮಾರ್ಗಿಗಳ್ ತ್ಯಾಗಿಯಂ|
ಬರಡಂ ಬಾಲರ ಮುದ್ದು ಬಂಜೆ ಕಡು ಚೋರಂ ಚಂದ್ರನಂ ಕಾವ್ಯದ ||
ಚ್ಚರಿಯಂ ಗಾಂಪರು ಪಾಪಿಗಳ್ ಸುಜನರಂ ಮಾಣಿಕ್ಯಮಂ ಮರ್ಕಟಂ |
ಜರೆಯಲ್ ಸಿಂಗವ ಕುನ್ನಿಯೇಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ||೨೦||

ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂಶುದ್ಧನೇನಪ್ಪನೇ|
ಕಡುಪಾಪಂ ಬಲು ಮೀಯಲಾತ ಶುಚಿಯೇ ಕಾಕಾಳಿಯೇಂ ಮೀಯದೇ ||
ಗುಡಪಾನಂಗಳೊಳದ್ದೆ ಬೇವಿನ ಫಲಂ ಸ್ವಾದಪ್ಪುದೇ ಲೋಕದೊಳ್ |
ಮಡಿಯೇ ನಿರ್ಮಲ ಚಿತ್ತವೈ ಹರ ಹರಾ ಶ್ರೀ ಚೆನ್ನಸೋಮೇಶ್ವರಾ ||೨೧||

(ಸೋಮೇಶ್ವರ- ಸೋಮೇಶ್ವರ ಶತಕ)

## ೪೪. ಹೆಣ್ಣುಮಕ್ಕಳು

ಪೆಣ್ಣ ಪೆತ್ತವರ ಬಳಗ ಬೆಳೆವುದು ಬೇಗ |
ಪೆಣ್ಣ ಪೆತ್ತವರು ಪೆರ್ಚುವರು ||
ಪೆಣ್ಣ ಪೆತ್ತುದರಿಂದೆ ಪೆಸರೆನಿಸಿತು ಏಂಗೆ |
ಬಣ್ಣವೇರಿತು ಪಾಲ್ಗಡಲು ||೧||

ಪೆಣ್ಣಿಂದೆ ಪೆರ್ಮೆಗೊಂಡನು ಹಿಮವಂತನು |
ಪೆಣ್ಣಿಂದೆ ಭೃಗು ಪೆರ್ಚಿದನು ||
ಪೆಣ್ಣಿಂದೆ ಜನಕರಾಯನು ಜಸವಡೆದನು |
ಪೆಣ್ಣ ನಿಂದಿಸಲೇಕೆ ಪೆರರು ||೨||

ಸಿರಿರಾಣಿಯು ಸೀತೆಯು ರುಕ್ಮಿಣಿಯು ಶ್ರೀ |
ಹರಿಯೊಡನೊಂದೆ ಪಂತಿಯೊಳು ||
ಇರಿಸಿ ಪೂಜೆಯನೊಡರಿಸುವರು ಪಿರಿಯರು |
ಪರಿಕಿಪೊಡಿವರು ಪೆಣ್ಣ್ಲಸೆ ||೩||

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ |
ಪೆಣ್ಣಲ್ಲವೆ ಪೊರೆದವಳು ||
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು |
ಕಣ್ಣು ಕಾಣದ ಗಾವಿಲರು ||೪||

ಕುವರನಾದೊಡೆ ಬಂದ ಗುಣವೇನದರಿಂದೆ |
ಕುವರಿಯಾದೊಡೆ ಕುಂದೇನು ||
ಇವರಿರ್ವರೊಳೇಳಿಗವಡೆದವರಿಂದೆ |
ಸವನಿಪುದಿಹ ಪರ ಸೌಖ್ಯ ||೫||

ಕುಲಪುತ್ರನೋದಿ ತಿಳಿದು ನಡೆವಲ್ಲದೆ |
ಕುಲವನುದ್ಧರಿಸಲರಿಯನು ||
ಕುಲಪುತ್ರಿಯೊಳುಗುವರನಿಗಿತ್ತ ಮಾತ್ರಕೆ |
ಕುಲಕೋಟಿಯನುದ್ಧರಿಪಳು ||೬||

ಸುಗುಣನಾವನು ಸುಚರಿತ್ರನಾವನು ಕಣ್ಗೆ |
ಸೊಗಸುವ ಸೊಬಗನಾರೆಂದು ||
ಬಗೆದುಭಾವಿಸಿಪೆಣ್ಣನೀವುದುವಂಶದೊ |
ಳೊಗೆದೊಳುಗುವರನಿಗೊಲಿದು ||೭||

ಅಲೆಗೆಯ್ಯದವಮತಿಯೆಸಗದ ವೈರವ |
ಬಲಿಸದ ಬರಿದೆ ಪಳಿಯದ ||
ಕೊಲೆಬೈಗುಳಿಂದೆ ಕೋಟಲೆಗೊಳಿಸದ ಸ |
ತ್ಕುಲಕೀವುದು ಕುವರಿಯನು ||೮||

ಪಣದಾಸೆ ನಂಟುತನದ ಪತ್ತುಗೆ ನೇಹ |
ದೆಣಿಕೆಗಳಿಂದೆದೆಗರಗಿ ||
ಗುಣ ಜೌವನಕುಲ ರೂಪುಗುಂದಿದ ನಡೆ |
ವೆಣಕೀಯಲಾಗದು ಪೆಣ್ಣ ||೯||

ಜಡನಿಗೆ ಜಾತಿಹೀನನಿಗೆ ಚಂಚಲನಿಗೆ |
ಕಡು ಮೂರ್ಖನಿಗೆ ಗಾಂಪನಿಗೆ ||
ಬಡತನದೊಳು ಬಲುಬವಣಿಗೊಂಬವನಿಗೆ |
ಕೊಡಲಾಗದು ಕುವರಿಯನು ||೧೦||

ಬಾಳಿ ಬದುಕಿ ತಣಿವಿಲ್ಲದ ತಮ್ಮಂತೆ |
ಬಾಳಲೆಳಸುವ ಬಾಲಕಿಯ ||
ಬೀಳುಗುವರನಿಗೆ ಬಲಿಗೆಯ್ದರೆಂಬುದ |
ಕೇಳಿ ಕಿವಿಯ ಮುಚ್ಚುವುದು ||೧೧||

ಹೊನ್ನಮ್ಮ – ಹದಿಬದೆಯ ಧರ್ಮ

# ೪೫. ಹದಿಬದೆಯ ಧರ್ಮ

ಉತ್ತರಕುತ್ತರವಿತ್ತುದಿರಾಡದೆ ।
ಯೊತ್ತಿ ನುಡಿಯದೊತ್ತರಿಸದೆ ॥
ಮತ್ತವರಿತ್ತಾಣತಿಯ ಮಸ್ತಕದೊಳು ।
ಪೊತ್ತು ಪೂಜಿಸುತೆಸಗುವುದು ॥೧॥

ಅತ್ತಿತ್ತ ನೋಡದೆಯುವಮತಿಗೆಯ್ಯದೆ ।
ಮತ್ತೆಯಾಗದೆ ಮರೆತಿರದೆ ॥
ಅತ್ತೆಮಾವಂದಿರಾಣತಿಯನಾಲಿಪುದೇಕ ।
ಚಿತ್ತದೊಳೇಕಪತ್ನಿಯರು ॥೨॥

ಕೂಗಿ ನುಡಿಯದೆ ಕೊಬ್ಬದೆ ಕೋಪವೆಸಗದೆ ।
ಮೂಗುವಡದೆ ವೋಡಿಗೊಳದೆ ॥
ಲೋಗರುಚಿತಮನಲೊಯ್ಯನೊಯ್ಯನೆಯಾನು ।
ವಾಗಿ ನುಡಿವುದವರೊಡನೆ ॥೩॥

ಮುದುಪರಱಿಯರೆಂದು ಮುಂದುಗೆಟ್ಟಾಡದೆ ।
ಚದುರರಲ್ಲೆಂದು ಜರೆಯದೆ ॥
ಇದು ಹಿತವೆಂದವರಿತ್ತುಪದೇಶವ ।
ನೆರ್ದೆಗೊಳಿಸುವುದೆಸಗುವುದು ॥೪॥

ಕುತ್ತವೆಣಿಸಿ ಕೋಪಗೊಳದೆ ಕೂರ್ತವರೆಮ್ಮ ।
ತೆತ್ತಿಗರೆಂದೆರ್ದೆಗೊಳಿಸಿ ॥
ಅತ್ತಿಗೆನಾದಿನಿಯರೊಳಂತರಂಗವ ।
ಪತ್ತುಗೆಗೊಳಿಸಿ ಬಾಳುವುದು ॥೫॥

ತಂದೆತಾಯನುಬಿಟ್ಟು ತವ್ಮ ಕೈಗೆಡೆಯಾಗಿ |
ಬಂದ ಸೊಸೆಯರ ಬಾಧಿಸದೆ ||
ಅಂದಂದಿಗುಡಿಗೆ ತೊಡಿಗೆಯೂಟವಿಾಹಗ |
ಳಿಂದ ಸಂತಸಗೊಳಿಸುವುದು ||೭||

ಬಳವಳಿಸದೆ ಪಳಿಯದೆ ಭಂಗಪಡಿಸದೆ |
ಹಸಗೆಡಿಸದೆ ಹದುಗಿಸದೆ ||
ಬಸಿರೊಳು ಬಂದ ಪೆಣ್ಮಕ್ಕಳ ಮಱುಕವ |
ಸೊಸೆಯರೆಡೆಯೊಳಿಸಗುವುದು ||೭||

ಬಸಿರನಿಟ್ಟೆಸಿಯುಣಬಡಿಸುವುದೊಳುಮುಡಿ |
ಯೆಸಕವರಿತು ಮಿಸಿಸುವುದು ||
ಒಸೆದು ಸಿಂಗರಿಸುವುದೊಲಿದು ನೋಡುವುದಿಂತು |
ಸೊಸೆಯರ ಸೊಗವಡಿಸುವುದು ||೮||

ಬುದ್ಧಿಗಲಿಯಲಱಿಯದ ಪಸುಮಕ್ಕಳ |
ಮುದ್ದಿಸಿ ಮುದವೇರುವುದು ||
ಬುದ್ಧಿಗಲಿವ ಕಾಲದೊಳು ಪೊಯ್ದು ಬೈದು ನ |
ಲ್ಬುದ್ಧಿಗಳನೆ ಬೋಧಿಸುವುದು ||೯||

ಓದುಗಲಿವ ಮಕ್ಕಳಿಗೂಟವಿಾಹವ |
ನಾದರದಿಂದನುಗೊಳಿಸಿ ||
ಓದಿಸುವರು ಕೊಂಡು ಬೈದೊಡಮವರನು |
ಮೂದಲಿಸದೆ ಸಮ್ಮತಿಪುದು ||೧೦||

ಬಸಿರಿಯ ಬಾಣಂತಿಯ ಬೇನೆವಡೆದರೆ |
ಹಸುಮಕ್ಕಳ ಹಯನುಗಳ ||
ಬಸವಳಿಸದೆ ಬಳಲಿಸದೆ ಬಯ್ಯದೆ ಬಗೆ |
ಯೊಸೆದುಚಿತದೊಳೋವುವುದು ||೧೧||

ಹೊನ್ನಮ್ಮ - ಹದಿಬದೆಯ ಧರ್ಮ

# ೪೬. ಸರ್ವಜ್ಞ ವಚನಗಳು

ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ಮತ್ತೆ |
ಒಬ್ಬ ಸರ್ವಜ್ಞ ಕರ್ತನೀಜಗಕೆಲ್ಲ |
ಒಬ್ಬನೇ ದೇವ ಸರ್ವಜ್ಞ ||೧||

ಚಿತ್ರವನು ನವಿಲೊಳು ವಿಚಿತ್ರವನು ಗಗನದೊಳು |
ಪತ್ರಪುಷ್ಪಗಳ ವಿವಿಧ ವರ್ಣಗಳಿಂದ |
ಚಿತ್ರಿಸಿದರಾರು ಸರ್ವಜ್ಞ ||೨||

ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ |
ದುರ್ಜನರ ಸಂಗದೊಡನಾಟ ಬಚ್ಚಲಿನ |
ರೊಜ್ಜಿನಂತಿಹುದು ಸರ್ವಜ್ಞ ||೩||

ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ |
ಅಲ್ಲದಹುದೆಂಬ ಅಜ್ಞಾನಿಯೊಡನಾಟ |
ಕಲ್ಲುಹಾದಂತೆ ಸರ್ವಜ್ಞ ||೪||

ಮಾನಹೀನರ ಸಂಗವೇನು ಕೊಟ್ಟರು ಬೇಡ |
ಮಾನವುಳ್ಳವರ ಸಂಗ ತಾ ಸಕ್ಕರೆಯು |
ಜೇನು ಸವಿದಂತೆ ಸರ್ವಜ್ಞ ||೫||

ದಂತಪಂಙ್ಕ್ತಿಯ ನಡುವೆ ಎಂತಿಪ್ಪುದದು ಜಿಹ್ವೆ |
ಅಂತು ದುರ್ಜನರ ಬಳಸಿನಲಿ ಸಜ್ಜನನು |
ನಿಂತಿಹನು ನೋಡ ಸರ್ವಜ್ಞ ||೬||

ಒಳ್ಳಿದರ ಒಡನಾಡೆ ಕಳ್ಳನೊಳ್ಳಿದನಕ್ಕು|
ಒಳ್ಳಿದನು ಕಳ್ಳರೊಡನಾಡೆ ಅವ ಶುದ್ಧ|
ಕಳ್ಳ ತಾನಕ್ಕು ಸರ್ವಜ್ಞ ||೭||

ಬರೆ ಕಂಡು ಕರೆಯುದನ ಬರೆ ಕುಳ್ಳಿರೆನ್ನದನ|
ಸರಸ ಸಜ್ಜನಿಕೆ ಇಲ್ಲದನ ಸಖ್ಯವ|
ಬೆರಸಲೇ ಬೇಡ ಸರ್ವಜ್ಞ ||೮||

ವಿದ್ಯೆ ಕಲಿತಡೆ ಇಲ್ಲ ಬುದ್ಧಿ ಕಲಿತಡೆ ಇಲ್ಲ|
ಉದ್ಯೋಗ ಮಾಡಿದಡೆ ಇಲ್ಲ ಗುರು ಮುಖವು|
ಇದ್ದಲ್ಲದಿಲ್ಲ ಸರ್ವಜ್ಞ ||೯||

ತಂದೆಗೂ ಗುರುವಿಗೂ ಒಂದು ಅಂತರವುಂಟು|
ತಂದೆ ತೋರುವನು ಸದ್ಗುರುವ ಗುರುರಾಯು|
ಬಂಧನವ ಕಳೆವ ಸರ್ವಜ್ಞ ||೧೦||

ಒಂದೊಂದು ಹನಿ ಬಿದ್ದು ನಿಂದಲ್ಲಿ ಮಡುವಕ್ಕು|
ಸಂದ ಸತ್ಪುರುಷರೊಡನಾಡೆ ಪರಬೊಮ್ಮ|
ಮುಂದೆ ಬಂದಕ್ಕು ಸರ್ವಜ್ಞ ||೧೧||

ಈವಂಗೆ ದೇವಂಗೆ ಆವುದಂತರವಯ್ಯ|
ದೇವನು ಜಗಕೆ ಕೊಡುತಿಹನು ಕೈಯಾರೆ|
ಈವನೇ ದೇವ ಸರ್ವಜ್ಞ ||೧೨||

ಉಣ್ಣೆ ಕೆಚ್ಚಲೊಳಿದ್ದು ಉಣ್ಣದದು ನೊರೆವಾಲ|
ಪುಣ್ಯವನು ಮಾಡಿ ಉಣಲೊಲ್ಲದವನಿರವು|
ಉಣ್ಣೆಗೂ ಕಷ್ಟ ಸರ್ವಜ್ಞ ||೧೩||

ಉಳ್ಳಲ್ಲಿ ಉಣಲಿಲ್ಲ ಉಳ್ಳಲ್ಲಿ ಉಡಲಿಲ್ಲ|
ಉಳ್ಳಲ್ಲಿ ದಾನ ಕೊಡಲೊಲ್ಲದವನೊಡವೆ|
ಕಳ್ಳಗೆ ನೃಪಗೆ ಸರ್ವಜ್ಞ ||೧೪||

ಇಚ್ಛೆಯನು ಅರಿದಿತ್ತ ನುಚ್ಚೊಂದು ಮಾಣಿಕವು|
ಇಚ್ಛೆಯದು ತೀರ್ದ ಬಳಿಕಿತ್ತ ಮಾಣಿಕವು |
ನುಚ್ಚಿಗು ಕಷ್ಟ ಸರ್ವಜ್ಞ ||೧೫||

ಆಗ ಬಾ, ಈಗ ಬಾ, ಹೋಗಿ ಬಾ, ಎನ್ನದಲೆ |
ಆಗಲೇ ಕರೆದು ಕೊಡುವನ ಧರ್ಮ ಹೊ |
ನ್ನಾಗದೆ ಬಿಡದು ಸರ್ವಜ್ಞ ||೧೬||

ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು |
ತನ್ನಂತೆ ಪರರ ಬಗೆದಡೆ ಕೈಲಾಸ |
ಬಿನ್ನಾಣವಕ್ಕು ಸರ್ವಜ್ಞ ||೧೭||

ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು |
ಪರಿಣಾಮವಕ್ಕು ಪದವಕ್ಕು ಕೈಲಾಸ |
ನೆರೆಮನೆಯಕ್ಕು ಸರ್ವಜ್ಞ ||೧೮||

ಕತ್ತಿಲಾದಾಗಾಯ ಮತ್ತಿರದೆ ಮಾಯುವುದು |
ಸುತ್ತಲಾಡುತಿಹ ಜಿಹ್ವೆಯ ಗಾಯ ತಾ |
ಸತ್ತು ಮಾಯುವುದೆ ಸರ್ವಜ್ಞ ||೧೯||

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು |
ಮೇಟಿಯಿಂ ರಾಟೆ ನಡೆದುದಲ್ಲದೆ ದೇಶ |
ದಾಟವೇ ಕೆಡುಗು ಸರ್ವಜ್ಞ ||೨೦||

ವಿದ್ಯೆಯುಳ್ಳನ ಮುಖವು ಮುದ್ದು ಬರುವಂತಿಕ್ಕು |
ವಿದ್ಯೆಯಿಲ್ಲದನ ಬರಿ ಮುಖವು ಹಾಳೂರ |
ಹದ್ದಿನಂತಕ್ಕು ಸರ್ವಜ್ಞ ||೨೧||

ಓದಿದಾ ಓದು ತಾ ವೇದ ಕಬ್ಬಿನ ಸಿಪ್ಪೆ |
ಓದಿನ ಒಡಲಿನರಿದಿಹರೆ ಸಿಪ್ಪೆ ಕ |
ಬ್ಬಾದಂತೆ ಕಾಣೊ ಸರ್ವಜ್ಞ ||೨೨||

ವಿದ್ಯೆ ಕಲಿಸದ ತಂದೆ ಬುದ್ಧಿ ಕೊಡದಾ ಗುರುವು |
ಬಿದ್ದಿರಲು ಬಂದು ನೋಡದಾ ತಾಯಿಯು |
ಶುದ್ಧ ವೈರಿಗಳು ಸರ್ವಜ್ಞ ||೨೩||

ಸತ್ಯಕ್ಕೆ ಸರಿಯಿಲ್ಲ ಮಿಥ್ಯಕ್ಕೆ ನೆಲೆಯಿಲ್ಲ |
ಹೆತ್ತಮ್ಮನಿಂದ ಹಿತರಿಲ್ಲ ನರರೊಳಗೆ |
ನಿತ್ಯರೇ ಇಲ್ಲ ಸರ್ವಜ್ಞ ||೨೪||



## ೪೭. ವಿದ್ಯೆ

ಮಕ್ಕಳಿಗೆ ತಂದೆ ಬಾಲ್ಯದೊ |
ಳಕ್ಕರ ವಿದ್ಯೆಗಳನಱುಪದಿರ್ದೊಡೆ ಕೊಂದಂ ||
ಲಕ್ಕಧನಮಿರಲು ಕೆಡುಗುಂ |
ಚಿಕ್ಕಂದಿನ ವಿದ್ಯೆ ಪೊರೆಗು ಚೂಡಾರತ್ನಾ ||೧||

ಬರೆಯದ ಕೈ ಬಂಧುಗಳಂ |
ಪೊರೆಯದ ಕೈ ಸುತರನೆತ್ತಿ ಕೊಂಡಾಡದ ಕೈ ||
ಕರೆದು ಬುಧಗ್ಗೀಯದ ಕೈ |
ಮರಗೈ ಮರುಳ್ಗೈಗಳಂತೆ ಚೂಡಾರತ್ನಾ ||೨||

ಓದದ ಬಾಯಮೃತಾನ್ನವ |
ಮೋದದ ಬಾಯ್ ಸಜ್ಜನರ್ಕಳಂ ಪ್ರಿಯದಿಂದಂ ||
ಆದರಿಸದ ಬಾಯದು ತಾಂ |
ಮೇದಿನಿಯೊಳ್ ಬಿಲದ ಬಾಯೆ ಚೂಡಾರತ್ನಾ ||೩||

ಬರೆವುದು ವಾಚಿಪುದಲಸದೆ |
ಪರಿಚಾರಿಪುದಲ್ಲಿಗಲ್ಲಿ ಬಲ್ಲನಿಬರೊಳಂ ||
ಸರಸಪ್ರಸಂಗಗೆಯ್ಯಲು |
ಸರಸಿಜಭವರಾಣಿಯೊಲಿಯದೇಂ ಮಾಣ್ದಪಳೇ ||೪||

ಓದಿನೊಳಲ್ಲದೆಯಿಹಪರ |
ಸಾಧನಸಂಪತ್ತು ಮಾಗದದು ಕಾರಣದಿಂ ||
ಓದುವುದು ಸಕಲಶ್ರುತಮಂ |
ಭೇದಿಸಲಳವಪ್ಪುದಲ್ತೆ ಚೂಡಾರತ್ನಾ ||೫||

ಕಿಱಿದಾದ ವಿದ್ಯೆಯಾಗಲಿ |
ಮೆಱೆವುದು ತನ್ನಲ್ಲಿ ಗುಣಗಳಿರ್ದೊಡೆ ಮತ್ತಾ ||
ಒಱತೆಯ ನೀರಾದೊಡೆ ತಾಂ |
ಬಱಿನಂ ಪಿಂಗಿಸದೆ ಸುಗುಣರತ್ನಕರಂಡಾ ||೬||



# ೪೮. ವಿವಿಧ ನೀತಿಗಳು

ಗುರು ದೈವಂ ವಿದ್ಯಾರ್ಥಿಗೆ ।
ತರುಣಿಗೆ ಪತಿ ದೈವವುೞಿದ ಮನುಜರ್ಗೆಲ್ಲಂ ॥
ಪೊರೆವನೆ ದೈವಂ ಜಗದೊಳ ।
ಗರಸಿಂಗಂ ಪ್ರಜೆಯೆ ದೈವಮೆಲೆ ಗುಣರತ್ನಾ ॥೧॥

ವಚನದೊಳಿಹಪರಸುಖಮುಂ ।
ವಚನದೊಳಂ ದೈವಗತಿಯು ದುರ್ಗತಿಯಕ್ಕುಂ ॥
ವಚನದೊಳರಿಮಿತ್ರತೆಯುಂ ।
ವಚನಾಮೃತದಿಂದೆ ತುಷ್ಟನೀಶ್ವರನಱಿಯಾ ॥೨॥

ನಡೆವೆಡೆಯೊಳ್ ನುಡಿವೆಡೆಯೊಳ್ ।
ಕೊಡುವೆಡೆಯೊಳ್ ತನಗೆ ನಿಂದೆ ಪೊರ್ದದ ತೆಱದಿಂ ॥
ನಡೆವುದು ನುಡಿವುದು ಕೊಡುವುದು ।
ಪಡೆವುದು ಸತ್ಕೀರ್ತಿಯಂ ವಿದಗ್ಧಲಲಾಮಾ ॥೩॥

ರಾಗರಸ ಮಿಗಲು ಸಭೆ ತಲೆ ।
ದೂಗಲು ತಾ ನುಡಿಯಬಲ್ಲೊಡವನುಡಿಯಿನಿಸೊಂ ॥
ದಾಗದಿರೆ ಸೈತು ಮಾಗಿಯ ।
ಕೋಗಿಲೆಯಂತಿಹುದು ಸುಗುಣರತ್ನಕರಂಡಾ ॥೪॥

ಸಾರಗುಣಿಯೊಡನೆ ದುರ್ಗುಣಿ ।
ಘೋರನೆ ಸಲೆ ಪೂಜ್ಯನಹನದೆಂತೆನೆ ಮುಡಿಯೊಳ್ ॥
ಸೌರಭ್ಯಕುಸುಮಸಂಗದಿ ।
ರುಂ ಸಲುವಂತೆ ಸುಗುಣರತ್ನಕರಂಡಾ ॥೫॥

ಆಗದರ ಮನವ ಕಂಡೊಡೆ |
ಬೇಗನೆ ತೊಲಗುವುದು ತೊಲಗದಿರ್ದೊಡೆ ಮತ್ತಾ ||
ನಾಗರ ಹೆಡೆನೆಳಲಾಸೆಗೆ |
ಪೋಗಿ ಸುಖಂಬಾಳ್ವೆನೆಂಬ ಕಷ್ಟಿವೊಲಕ್ಕುಂ ||೬||

ಹೊನ್ನಮ್ಮ – ಹದಿಬದೆಯ ಧರ್ಮ

---

## ೪೯. ಮೂರ್ಖರು

ಸಾಲಮಾಡಿಯೆ ಸರಕು ಕೊಳ್ಳುವ|
ಮುದುಕ ತಾ ಕನ್ಯೆಯನು ವರಿಸುವ |
ತಾನು ನೋಡದ ಗ್ರಂಥ ಟೀಕಿಪ |
ಕಾಂಬ ವಸ್ತುವ ಮರೆಯಮಾಡುವ|
ಮನುಜರಿವರೇ ಮೂರ್ಖರೆನಿಸುವರು ||೧||

ಲಾಭಕಾಲದಿ ಕಲಹ ತೆಗೆಯುವ |
ಉಂಬ ಸಮಯದಿ ಕೋಪಗೊಳ್ಳುವ |
ಹೊತ್ತನರಿಯದೆ ಹರಟೆ ಹೊಡೆಯುವ |
ಸಮಯ ಬಂದಿರೆ ಸುಮ್ಮನಿರುತಿಹ|
ಮನುಜರಿವರೇ ಮೂರ್ಖರೆನಿಸುವರು ||೨||

ಲಾಭದಾಶೆಗೆ ಹಣವ ಕಳೆಯುವ |
ಅನ್ಯರೊಂದಿಗೆ ಬಿರುಸನಾಡುವ |
ಮಗಗೆ ಧನವಿತ್ತಧನನಾಗುವ |
ಪತ್ನಿ ಪಕ್ಷದ ಜನವ ಯಾಚಿಪ |
ಮನುಜರಿವರೇ ಮೂರ್ಖರೆನಿಸುವರು ||೩||

ಬುದ್ಧಿಗರ್ವದಿ ಹಿತವ ಕೇಳದ |
ಕುಲದ ಮದದಲಿ ಕೆಲಸ ಮಾಡದ |
ಸ್ನಿಕ್ಕದೊಡವೆಯ ನಿತ್ತು ಒಯುಸುವ |
ರೋಗಿಯಾಗಿಯು ಪಥ್ಯಮಾಡದ|
ಮನುಜರಿವರೇ ಮೂರ್ಖರೆನಿಸುವರು ||೪||

ದುಃಖವಾಗಲು ದೈನ್ಯ ತೋರುವ |
ಪೂರ್ವ ಕಷ್ಟವ ಸುಖದಿ ಮರೆಯುವ |
ಅಲ್ಪರಕ್ಷೆಗೆ ಅಧಿಕ ವೆಚ್ಚಿಪ |
ಪರಿಕಿಸಲು ವಿಷವನ್ನೆ ಸೇವಿಪ |
ಮನುಜರಿವರೇ ಮೂರ್ಖರೆನಿಸುವರು ||೫||

ಪಂಡಿತನು ನಾನೆಂದು ಹರಟುವ |
ಸುಭಟನೆಂತೆಂದಭಯನಾಗಿಹ |
ತನ್ನ ಹೊಗಳಲು ಪ್ರೈಯ ಮರೆಯುವ |
ವಕ್ರವಾಕ್ಯದಿ ಮರ್ಮಭೇದಿಪ |
ಮನುಜರಿವರೇ ಮೂರ್ಖರೆನಿಸುವರು ||೬||

ದೂತನಾಗಿಯು ವಾರ್ತೆಮರೆಯುವ |
ಹಾಡುಹಗಲಲಿ ಕಳವು ಮಾಡುವ |
ಭೂರಿಭೋಜನವಿಕ್ಕೆ ಹೊಗಳುವ |
ಶ್ಲಾಘಿಸಲು ಭೋಜನವ ತೊರೆಯುವ |
ಮನುಜರಿವರೇ ಮೂರ್ಖರೆನಿಸುವರು ||೭||

ಬಿಕ್ಕೆಬೇಡಿ ಸುಭೋಜ್ಯಕೇಳಸುವ |
ಗುರುವೆನಿಸಿ ಕೀಳ್ಗಯ್ಮೆಗಿಳಿಯುವ |
ಕೆಟ್ಟಕೆಲಸವ ಮಾಡೆ ಹೇಸದ |
ಬಿಗುವಿನಿಂದೆ ಸಹಾಯಬೇಡದ |
ಮನುಜರಿವರೇ ಮೂರ್ಖರೆನಿಸುವರು ||೮||

('ಶತಮೂರ್ಖರು' ಎಂಬ ಹೊತ್ತಿಗೆಯಿಂದ)

# ೫೦. ತೆಂಕಣ ಗಾಳಿಯಾಟ

ಬರಲಿದೆ! ಅಹಹಾ! ದೂರದಿ ಬರಲಿದೆ-
ಬುಸುಗುಟ್ಟುವ ಪಾತಾಳದ ಹಾವೊ?
ಹಸಿವಿನ ಭೂತವು ಕೂಯುವ ಕೂವೊ?
ಹೊಸತಿದು ಕಾಲನ ಕೋಣನ - ಓವೊ!
ಉಸಿರಿನ ಸುಯ್ಯೋ? - ಸೂಸೂಕರಿಸುತ,

ಬರುವುದು! ಬರಬರ ಭರದಲಿ ಬರುವುದು-
ಬೊಬ್ಬೆಯ ಹಬ್ಬಿಸಿ, ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ,
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ,
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ,

ಬರುತದೆ! ಮೈತೋರದೆ ಬರುತದೆ! ಅದೆ-
ನಡು ಮುರಿಯುತ ನಗನಾವೆಗೆ, ಕೂವೆಗೆ
ಉಡಿಸಿದ ಹಾಯಿಯು ಹರಿಯುತ ಬಿರಿಯುತ,
ಹಡಗನು ಕೀಲಿಸಿ, ತುಮುರನು ತೇಲಿಸಿ,
ದಡದಲಿ ಝಾಡಿಸಿ, ದೋಣಿಯನಾಡಿಸಿ,

ಇದೆ! ಇದೆ! ಬರುತಿದೆ! ಇದೆ! ಇದೆ! ಬರುತಿದೆ-
ಹಕ್ಕಿಯ ಕಣ್ಣಿಗೆ ಧೂಳಿನ ಕಾಡಿಗೆ
ಇಕ್ಕುತ, ಹೊಲದೆತ್ತಿಗೆ ದನಕಾಡಿಗೆ
ಫಕ್ಕನೆ ಹಟ್ಟಿಗೆ ಅಟ್ಟಿಸಿ, ಕಾಡಿಗೆ
ಸಿಕ್ಕಿದ ಕಿಚ್ಚನು ಊದಲು ಹಾರುತ, ||೪||

ಬರುತಿದೆ! ಇದೆ! ಇದೆ! ಇದೆ! ಇದೆ! ಬರುತಿದೆ–
ಸಡಿಲಿಸಿ ಮಡದಿಯರುಡಿಯನು ಮುಡಿಯನು,
ಬಡ ಮುದುಕರ ಕೊಡೆಗರಿ ಹರಿದಾಡಿಸಿ,
ಹುಡುಗರ ತಲೆ ತಲೆ ಟೊಪ್ಪಿಯ ಆಟವ
ದಡಬಡನಾಡಿಸಿ, ಮನೆ ಮನೆ ತೋಟವ
ಅಡಿಮೇಲಾಗಿಸಿ, ತೆಂಗನು ಲಾಗಿಸಿ
ಅಡಕೆಯ ಬಾಗಿಸಿ, ಪನೆ ಇಬ್ಭಾಗಿಸಿ,
ಬುಡದೂಟಾಡಿಸಿ, ತಲೆ ತಾಟಾಡಿಸಿ,
ಗುಡಿಸಲ ಮಾಡನು ಹುಲುಹುಲುಮಾಡಿಸಿ,

ಬಂತೈ! ಬಂತೈ! ಇದೆ! ಇದೆ! ಬಂತೈ!–
ಗಿಡ ಗಿಡದಿಂ – ಚೆಲುಗೊಂಚಲು ಮಿಂಚಲು–
ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ,
ಎಡದಲಿ ಬಲದಲಿ ಕೆಲದಲಿ ನೆಲದಲಿ,
ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ,
ಸಿಡಿಲನು ತಾಳೆಗೆ ಬಾಳೆಗೆ ಎರಗಿಸಿ,
ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್
ಕುಡಿ ನೀರನು ಒಣಗಿದ ನೆಲಕೆರೆವೋಲ್
ಬಂತೈ ಬೀಸುತ! ಬೀಸುತ ಬಂತೈ!
ತೆಂಕಣ ಗಾಳಿಯು ಕೊಂಕಣ ಸೀಮೆಗೆ।
ಬಂತೈ! ಬಂತೈ! ಬಂತೈ! ಬಂತೈ!

—ಕವಿಶಿಷ್ಯ

---

## ೫೧. ಕನ್ನಡತಾಯ ನೋಟ

ಏನು ಚೆಲುವಿನ ನಾಡು ! ಚೆಲುವು ಚೆಲ್ಲುವ ನಾಡು ! ಕನ್ನಡದ ನಾಡು !
ಏನು ಚಿನ್ನದ ನಾಡು ! ನಮ್ಮೊಲುಮೆಯಾ ನಾಡು ! ನಮ್ಮಿನಿಯ ನಾಡು
ಕಾವೇರಿಯಿಂದಮಾ ಗೋದಾವರಿಯ ವರೆಗೆ ಚಾಚಿರುವ ನಾಡು !
ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು
ಕಾರ್ಮೋಡಗಳು ಕಪ್ಪು, ಹೊಳೆಕೆರೆಯ ಮಡು ಕಪ್ಪು, ತಾಯ ಕಾಲ್ ತೊಳೆವ
ಉಪ್ಪು ಕಡಲದು ಕಪ್ಪು, ಜನ ಕಪ್ಪು—ಏನೆಂದೆ ? ತಪ್ಪು, ತಪ್ಪು !—
ಮೂಡ ಪಡುವಲು ತಿರುಗು, ಬಡಗ ತೆಂಕಲು ತಿರುಗು, ಕರ್-ನಾಟದಲ್ಲಿ,
ನಿಮ್ಮೂರ ಹೆಣ್ಣುಗಳ ಕಣ್-ನೋಟ, ತಣ್-ನೋಟ ಕರ್ಪು, ಬಲು ಕರ್ಪು
ಕರ್ಪೊ, ಬೆಳ್ಪೋ ಕಾಣೆ, ಕನ್ನಡದ ಕಣ್ಣೋಟ-ಕೂರ್ಪು, ಆರ್ಪು !
ಓ ತಾಯೆ, ಕನ್ನಡದ ಪೆರ್-ತಾಯೆ, ನಮ್ಮಮ್ಮ, ದೇವಿ, ಸಮ್ರಾಜ್ಞಿ,
ಸುಳಿಗುರುಳು, ನಗೆಗಣ್ಣು ಏನು ಕಪ್ಪೇ ನಿನಗೆ—ಮುತ್ತಿಡುವ ಕಪ್ಪು !
ನಿನ್ನ ಕಲಿಗಳ ಕೂರ್ಪು, ಕೆಚ್ಚೆದೆಯ ಕಟ್ಟಾಳ ಕೂರ್ಪು, ನೆಚ್ಚಾರ್ಪು,
ಆರು ತಡೆಯಲುಬಹುದು—ಪುಲಕೇಶಿ ಹರ್ಷರೇ ಹೊಯ್ದು ಸಾರುವರು.
ಕರ್ಪಿರಲಿ, ಕೂರ್ಪಿರಲಿ, ನಿನ್ನ ಬೆಳ್ಪನು ಹೇಳು – ಕೂರಸಿಯ ಮಿಂಚು,
ಕಾರ್-ಮಿಂಚು, ಪೆಣ್ಮಣಿಗಳಾ ಕಣ್ಣ ನುಣ್ಮಿಂಚು, ಅರಿದರಾ ಕೂರ್-ನೋಟ ಮಿಂಚು !
ಮೆಲ್ಲ ಮೆಲ್ಲನೆ ತೇಲಿ, ಆಳದಲಿ ಮುಳೆಯೆಡೆಯೊಳಲುಗದೆಯೆ ಅಲುಗಿ,
ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಳಂಗೆಡೆವ ನೀರ್-ಬೀಳ ಬೆಳ್ಪು!
ಕಡೆದ ನೊರೆ, ಚಿಗಿವ ನೊರೆ, ತೂರು ನೊರೆ, ಕುದಿವ ನೊರೆ, ಬೆಳ್ಪಿನೊಳ್ ಬೆಳ್ಪು !
ಆ ಬೆಳ್ಪು, ಆ ತೆಳ್ಪು, ಆ ಮೆಲ್ಪು – ನಿನ್ನ ಮಕ್ಕಳ ಬಾಳಿನೊಳ್ಪು ;
ನೀರ್-ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳ್ಪು !

ಪೆಕ್ಗ್ಗಳವೊ, ತೀರ್ಥಗಳೊ, ಧರ್ಮಧರ್ಮದ ತಿರುಳೊ, ಪಾಡುವರ ಪುರುಳೋ,
ಒಳ್ಗನ್ನಡದ ಕಲೆಯೊ, ಕುಸುರಿಗೆಲಸದ ಸಿಲೆಯೊ, ಆ ನಯವೊ, ಮೆರುಗೋ!
ನಿನ್ನ ಚೆಣ್ಣರ ಸೊಬಗೊ, ಬೆಡಗೊ, ಪೆಳ್ಳಿದ ತಣ್ಪೊ, ಕೊಡುಗೈಯ ಬಿಣ್ಪೋ!
ಓ ಎನ್ನ ತಾಯಿ, ಕನ್ನಡ ತಾಯಿ, ನಮ್ಮವ್ವ, ದೇವಿ, ಸಮ್ರಾಜ್ಞಿ,
ನಿನ್ನನರಸುತ ಸುಳಿವ, ನೋಂಪಿಯೆನೆ ನಿನ್ನೊಲುಮೆ-ನಾಡನೊಳಕೊಳುವ,
ನಿನ್ನ ಚೆಲುವನು ಸವಿವ ಮುಗುವಾರು ತಣಿಯದನು, ಹಾಡಿ ಕುಣಿಯದನು,
ಭಕ್ತಿಯಲಿ ತಲೆದೂಗಿ ಬಾಗಿ ಮಣಿಯದನು!

## ೫೨. ವನಸುಮ

ವನಸುಮದೊಲೆನ್ನ ಜೀ
ವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ-ಹೇ ದೇವ
ಜನಕೆ ಸಂತಸವೀವ
ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್ ಬಿಡದೆ

ಕಾನನದಿ ಮಲ್ಲಿಗೆಯು
ಮೌನದಿಂ ಬಿರಿದು ನಿಜ
ಸೌರಭವ ಸೂಸೆ ನಲವಿಂ
ತಾನೆಲೆಯ ಪಿಂತಿರ್ದು
ದೀನತೆಯ ತೋರಿ ಅಭಿ
ಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ

ಉಪಕಾರಿ ನಾನು ಎ
ನ್ನುಪಕೃತಿಯು ಜಗಕೆಂಬ
ವಿಪರೀತ ಮತಿಯನುಳಿದು
ವಿಪುಲಾಶ್ರಯವನೀವ
ಸುಫಲ ಸುಮಭರಿತ ಪಾ
ದಪದಂತೆ ನೈಜವಾದೊಳ್ಪಿನಿಂ ಬಾಳ್ವವೊಲು

—ಡಿ. ವಿ. ಗುಂಡಪ್ಪ



## ೫೩ ಭರತನ ಭಕ್ತಿ

ಅರಸಡವಿಗೈದಿದೊಡಮ್, ಅವನಿತ್ತ ಪಾದುಕೆಗ ।
ಳೊರೆಯುದೊಡವೇನನುಂ, ತಾಂ ವರದಿಯೊರೆದು ॥
ದೊರೆತನದ ಭಾರವನು ಹೊತ್ತು ದೊರೆಯಾಗದಾ ।
ಭರತನವೊಲಿರು ನೀನು– ಮಂಕುತಿಮ್ಮ

ಒಡೆಯನೆಂದೋ ಬಂದು ಕೇಳ್ವನದಕುತ್ತರವ ।
ಕೊಡಬೇಕು ತಾನೆನುವವೊಲು ಋಜುತೆಯಿಂದ ॥
ಒಡಲ ಜಾಣಿನ, ಜೀವಶಕ್ತಿಗಳನೆಲ್ಲವನು ।
ಮುಡುಪುಕೊಟ್ಟನು ಭರತ– ಮಂಕುತಿಮ್ಮ

ಒಡರಿಸುವನೆಲ್ಲವನ್, ಅದಾವುಮಂ ತನದಲ್ಲ ।
ಬಿಡನೊಂದನುಂ ರಾಜ್ಯ ತನದಲ್ಲವೆಂದು ॥
ನಡೆವಂ ಸ್ವತಂತ್ರದಲಿ ಸಲಿಸುತೆ ವಿಧೇಯತೆಯ ।
ಕಡುಯೋಗಿ ಭರತನಲ ?– ಮಂಕುತಿಮ್ಮ

ದೊರೆತನದ ಜಟಿಲಗಳ, ಕುಟಿಲಗಳ, ಕಠಿನಗಳ |
ಭರತನುಳಿಸಿದನೆ ರಾಮನ ತೀರ್ಪಿಗೆಂದು ? ||
ಅರಿವಿಗಿಹ ಕರ್ತವ್ಯಭಾರವನು ತಾನಂತು |
ಧುರವ ಧರಿಸಿದನವನು- ಮಂಕುತಿಮ್ಮ ||೪||

ಪ್ರತ್ಯಕ್ಷವಿಲ್ಲದಾ ಸ್ವಾಮಿಯಂ ನೆನೆನೆನೆದು |
ಸತ್ಯಭಕ್ತಿಯು ಸೇವೆಗೆಯ್ದುವಂ ಭರತಂ ||
ನಿತ್ಯಜೀವನದಿ ನೀನಾನಯವನನುಸರಿಸೊ |
ಸತ್ವದಾಶೆಯ ನೀಗಿ- ಮಂಕುತಿಮ್ಮ ||೫||

ಧರೆಯೆ ಕೋಸಲ, ಪರಬ್ರಹ್ಮನೇ ರಘುವರನು |
ಭರತನವೊಲನುಪಾಲನ ಕ್ರಿಯರು ನಾವು ||
ಅರಸನೂಳಿಗ ನಮ್ಮ ಸಂಸಾರದಾಡಳಿತ |
ಹರುಷದಿಂ ಸೇವಿಸೆಲೊ- ಮಂಕುತಿಮ್ಮ ||೬||

( ಡಿ. ವಿ. ಗುಂಡಪ್ಪ—ಮಂಕುತಿಮ್ಮನಕಗ್ಗ )

—◆◆*◆◆—

# ೫೪. ಗೊಲ್ಗೊಥಾ

ಅಂದಿದೊ ವಸಂತಪೂರ್ಣಿಮೆಯ ಭೃಗುವಾರದಾ
ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳಿವಿಲ್ಲ ;
ನೋಡೊಂದೆ ಬರವೋಡ ಬಾನಗಲ ಚಾಚಿ ನೋ
ಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು ;
ವೇಗೆಯುಂ ತಡೆಯಲಾಗದು, ಗಾಳಿ ಸೂಸದಿಳೆ ೫

ಯುಬ್ಬಸದೊಳೇದುತಿದೆ, ಮರಗಳಲಿ ಕದಲದೆಲೆ,
ಹಕ್ಕಿಗಳ ಉಸುರಿಲ್ಲ ; ನಟ್ಟಿರುಳೊಳಂತೆ ಮನೆ
ಮನೆಯೊಳುಸಿಕನೆ ಸಂತಮಿರತಕ್ಕ ಜನಪದಂ
ಧಗೆಯ ಹೆಬ್ಬಾವಂತೆ ಹೊರಟು ತಿಂತಿಣಿವರಿಂದು
ಬಂತು ಶಲಭಸಮೂಹದಂತೆ ಯೇರೂಸಲೇಮ್
ನಗರದಗಸೆಯ ಹೊರಗಿರುವ ಕಪಾಲಸ್ಥಾನ
ವೆಂಬುವಾ ಗೊಲ್ಗೊಥಾ ಗಿರಿಗೆ. ಬಂದಿಗಳಿಂದ
ಹೊರಿಸಿ ತಂದಾ ಮೂರು ಸಿಲುಬೆಗಳ ನಟ ರಾ
ಗೊಲ್ಗೊಥದ ಶಿಖರದಲಿ ; ಯೇಸುವಂ ನಡುವೆ ವೆ
ಣೆಡಬಲದೊಳಾ ಕಳ್ಳರಿಬ್ಬರಂ ಸಿಲುಬೆಗಳಿ
ಗಿಕ್ಕಿ, ಕೈಕಾಲ್ಗಳಿಗೆ ಮೊಳೆ ಜಡಿದು, ಯೇಹೂದ್ಯ
ರರಸನೀ ನಜರಾಯ ಯೇಸುವೆಂದಾ ಬರೆದ
ಹಲಗೆಯಂ ತಲೆಗಡೆಗೆ ತೂಗಿದರು. ಹದ್ದು ಬಿಗಿ
ಪಿಡಿದ ಲಾವಿಗೆಯಂತೆ, ಪಡುವಣದಿ ಬಿಳಿಯ ಬಿದಿ
ಗೆಯ ತಿಂಗಳಂತೆ, ಬಿಲ್ಲಿಗೆ ತೊಟ್ಟ ಸರಳಂತೆ,
ಮರಣವೃಕ್ಷದೊಳಮೃತಫಲದಂತೆ ತೂಗುತಿರೆ,
ತನ್ನ ಬೇನೆಯನಣಂ ಗಣಿಸದವನುಸುರಿದಂ—
ನರದೇಹವೆತ್ತವನಿಗಾ ತನುವ ಗುಣಧರ್ಮ
ವಹ ಬೇನೆ ಇಲ್ಲದಿಹುದೆಂತು? ತಾನಾರ ತನು
ಮನವನಿನಿಸಾದೊಡಂ ನೋಯಿಸಿಲ್ಲೆಂದು ಸಾ
ವಿರ ಚೇಳ್ಗಳೊಮ್ಮೆಗಕಟಾ ಕಡಿವ ಯಾತನೆಯ
ಸಿಲುಬೆಯುಳಲುರಿಯ ತಣ್ಣನೆ ತಳೆದು, ತಾಯಮೊಗ
ನೋಡೆ ಮಗು ಬೆಸಲಳಲನೋತು ಸ್ಮೈರಿಸುವಂತೆ,
ಚೂಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂ
ಗಾದಾಡಿ ಮಡಿದು ಜಯವಡುವಂತೆ, ನರನರಂ
ಗಳಲಿ ಕುದಿಕುದಿವ ವೇದನೆ ಸೋಸಿ, ತನ್ನ ತೊರೆ
ದರ್ಭಕರ ಹಂಬಲಿಸುವ ಮುಮೂರ್ಷು ತಾಯಂತೆ,

ತನ್ನ ಕಡಿವವರ್ಗೆ ತಣ್ಣೆಳಲೀವ ಮರದಂತೆ,
ತನ್ನ ಕೊಲುವವರ ಹಂಬಲದಿ ಮರೆತುಸುರಿದಂ–
'ಕ್ಷಮಿಸಿವರನೆಲೆ ತಂದೆ! ತಾವೇನನೆಸಗಿದಪೆ
ವೆಂದರಿಯರಿವರು.' ನೆರೆದವರದಂ ಕೇಳಿ, 'ಹಾ!
ನಮಗಾಗಿ ಕ್ಷಮೆಯ ಯಾಚಿಸುವುದಂತಿರಲಿ; ನೀ
ದೇವಸುತನಾಗಿದ್ದರೀ ಸಿಲುಬೆಯಿಂದಿಳಿದು
ಬಾರ ನೋಡುವ!' ಎಂದು ಜಟಕರಿಸೆ, ಯಾಜಕರು
'ಅನ್ಯರಂ ರಕ್ಷಿಸಿದಿವಂ ತನ್ನ ತಾನೆ ರ
ಕ್ಷಿಸಲಾರನಾದನೆ? ಯೆಹೂದ್ಯರರಸಂತೆ! ತಾ
ನಿಳಿತರಲಿ ಸಿಲುಬೆಯಿಂದೊಡನೆ ನಂಬುವೆವಿವನ!
ದೇವರೊಳೆ ಭರವಸಿಗನಂತೆ! ಕಾಂಬೆವು ದೇವ
ರೀತನಂ ರಕ್ಷಿಸಲಿ! ದೇವಸುತ ತಾನೆಂದ
ನಲ್ಲ!' ಎಂದಣಕಿದರು.
ಅನಿತರೊಳೆ ಬಿರುಗತ್ತ
ಲೊಂದು ಬಾನೆಲ್ಲವಂ ಬಾಸಣಿಸಿ, ದೇವಸುತ
ನಮೃತನೀ ಮೃತಿನಾಟಕದ ಕಡೆಯ ತೆರೆಯಂತೆ
ಭೂವ್ಯೋಮಗಳ ನಡುವೆ ಮುಸುಕಿದುದು. ಸೂರ್ಯೋಪ
ರಾಗಮೇನಿಂದು ಹುಣ್ಣಿಮೆಯೊಳೆನೆ ನಕ್ಷತ್ರ
ವೊಂದಿಲ್ಲ. ಮಳೆಯ ಕತ್ತಲೆಯೊ? ಕತ್ತಲ ಮಳೆಯೊ?
ಅಲ್ಲದೆ ನಭೋಗ್ನಿಮುಖಿಯಿಂದುಗುವ ಕಬ್ಬೊಗೆಯೊ?
ಮಿಸ್ರದೊಂಬತ್ತನೆಯ ಮಾರಿ ತಲೆದೋರಿತೇ?
ಹಗಲ ಮೂರನೆಯ ಜಾಮದೊಳೆ ಹಗಲಿನ ದೀಪ
ವಾರಿತೇನೆಂದು ನೆರೆದವರೆಲ್ಲರೆದೆ ನಡುಗೆ,
ಸಿಲುಬೆಯೊಳೆಲೀ! ಎಲೀ! ಲಮ್ಮಾ ಸಬಖ್ತಾನಿ?
(ದೇವರೇ! ದೇವರೇ! ಯಾಕೆನ್ನ ಕೈಬಿಟ್ಟೆ?)
ಎಂದು ದಾವೀದ ನೃಪನಂದಿನಾರ್ತಧ್ವಾನ
ದಿಂದರಚಿ ಯೇಸು, ನಿಂದವರಲ್ಲಿ ಕೆಲವರಿವ

ನೇಲೀಯನಂ ಕರೆವನೇಲೀಯನೇಂ ಬಂದು
ಕಾದಪನೊ ಕಾಂಬೆವೆನೆ, ಮೇಘನಿರ್ಘೋಷದಿಂ
‘ತಂದೆಯೆ! ಮಮಾತ್ಮವಂ ನಿನ್ನ ಕೈಗೊಪ್ಪಿಸುವೆ!’
ಎಂದು ಗಗನದಿ ಯೇಸ ಕಣ್ಣೂರಿ, ತುದಿಬೆಟ್ಟ
ದಿಂ ಕರೆವ ತಾಯೆಡೆಗೆ ಮರಿಜಿಂಕೆ ಜಿಗಿವಂತೆ,
ಸುಗ್ಗಿಯೆಡೆಗಯ್ದುವಾ ಬಾನಕ್ಕಿಯಂತೆ, ದಿನ!
ಮುಖದೊಳಿರುಳಿನ ಸೊಡರು ನೇಸರಂಬುಗುವಂತೆ,
ಕ್ಷಿತಿಜದಿಂ ಸಿಡಿದು ಮೇಲ್ನೆಗೆವ ಮಿಂಚಂತೆ, ಯೇ
ಸುವಿನಾತ್ಮವೊಡನೆ ಬೆಳಕಿನ ಬೀಡಿಗಯ್ದೆ, ನಿಲು
ನೇಸರುಗಳೆಡೆಗಯ್ದೆ, ಕಣ್ಮುಗಿದು ತಲೆವಾಗಿ,
ತನ್ನ ಪಡೆದೆರವನೊಡೆಯಂಗೆ ಮರಳೀವಂತೆ
ತನ್ನ ತಂದೆಗೆ ಯೇಸುವಸುವನೊಪ್ಪಿಸಿದಂ.
ಗಡಗಡನೆ ಭೂಮಿ ನಡುಗಿತು, ದುಃಖವಾರ್ತೆಯಂ
ಜಗಕೆಲ್ಲ ಕೇಳಿಸುವ ಮರಣದುಂದುಭಿಯಂತೆ.
ನೆರೆದರೆದೆಯೆದೆ ಭೀತಿಯಿಂದ ಮಾರ್ವೊಳಗಿದುದು.
ಕಾವಲಿನ ರೋಮಕ ಶತಾಧಿಪತಿ ಕುದುರೆಯಲಿ
ಜೂಗಳಿಸೆ, ಕೆಳಗಿಳಿದು ಸೀಸಕಂ ತೆಗೆದಿವಂ
ದೇವತನಯಂ ಗಡಾ! ಎಂದು ವಿಸ್ಮಯದೊಳಾ
ಹಗಲ ತಿಂಗಳನೆ ಎವೆಯಿಕ್ಕದೀಕ್ಷಿಸಿದಂ.

—ಗೋವಿಂದ ಪೈ

## ೫೫. ಹಕ್ಕಿ ಹಾರುತಿದೆ ನೋಡಿದಿರಾ ?

ಇರುಳಿರುಳಳಿದು ದಿನ ದಿನ ಬೆಳಗೆ
ಸುತ್ತು ಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆತೆರೆದಿಕ್ಕುವ ಹೊತ್ತಿನ ಒಳಗೆ
ಹಕ್ಕಿ ಹಾರುತಿದೆ ನೋಡಿದಿರಾ ?

ಕರಿನರೆ ಬಣ್ಣದ ಪುಚ್ಚಗಳುಂಟು
ಬಿಳಿ-ಹೊಳೆ ಬಣ್ಣದ ಗರಿ-ಗರಿಯುಂಟು
ಕೆನ್ನನ ಹೊನ್ನನ ಬಣ್ಣ-ಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿ ಹಾರುತಿದೆ ನೋಡಿದಿರಾ ?

ನೀಲಮೇಘಮಂಡಲ ಸಮ ಬಣ್ಣ !
ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ !
ಚಿಕ್ಕೆಯ ಮಾಲೆಯ ಸೆಕ್ಕಿಸಿಕೊಂಡು
ಸೂರ್ಯ-ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ ನೋಡಿದಿರಾ ?

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲ ಗಿಂಡಲಗಳ ಗಡ ಮುಕ್ಕಿ
ತೇಲಿಸಿ ಮುಳುಗಿಸಿ ಖಂಡ-ಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ
ಹಕ್ಕಿ ಹಾರುತಿದೆ ನೋಡಿದಿರಾ ?

ಯುಗ-ಯುಗಗಳ ಹಣೆಬರಹವ ಒರಸಿ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನಗೊಳಿಸಿ
ಹೊಸಗಾಲದ ಹಸುಮಕ್ಕಳ ಹರಸಿ
ಹಕ್ಕಿ ಹಾರುತಿದೆ ನೋಡಿದಿರಾ ?

ಬೆಳ್ಳಿಯ ಹಳ್ಳಿಯ ಮೇರೆಯಮೀರಿ
ತಿಂಗಳಿನೂರಿನ ನೀರನು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳಲೋಕದ ಅಂಗಳಕೇರಿ
ಹಕ್ಕಿ ಹಾರುತಿದೆ ನೋಡಿದಿರಾ ?

ಮುಟ್ಟಿದೆ ದಿಙ್ಮಂಡಲಗಳ ಅಂಚ
ಆಚೆಗೆ ಚಾಚಿದೆ ತನ್ನಯ ಚುಂಚ
ಬ್ರಹ್ಮಾಂಡಗಳನು ಒಡೆಯಲು ಎಂದೊ
ಬಲ್ಲರು ಯಾರಾ ಹಾಕಿದ ಹೊಂಚ
ಹಕ್ಕಿ ಹಾರುತಿದೆ ನೋಡಿದಿರಾ ?

(ಅಂಬಿಕಾತನಯ-ಗರಿ)



## ೫೭. ನನ್ನ ಹಾಡು

ನನ್ನ ಹರಣ
ನಿನಗೆ ಶರಣ
ಸಕಲ ಕಾರ್ಯಕಾರಣಾ
ನಿನ್ನ ಮನನ
ದಿಂದ ತನನ-
ನೆನುತಿದೆ ತನು ಪಾವನಾ.

ಸುಖದ ಮಿಷವು
ದುಃಖ ವಿಷವು
ಹಿಗ್ಗಿ ಪ್ರಾಣ ಪೂರಣಾ
ಪಂಚಕರಣ
ಗಳೀ ಗಡಣ
ಕಟ್ಟಿತು ಗುಡಿ ತೋರಣಾ.

ನಿನ್ನ ಚರಣ
ಸುಸಂತರಣ
ಜಗದ್ಭರಿತ ಭಾವನಾ
ಹಾಸ್ಯಕಿರಣ
ತದನುಸರಣ
ತದಿತರ ಪಥ ಕಾಣೆ ನಾ.

ಹರುಷ ರಸವೆ
ಕರುಣದಸುವೆ
ಜೀವಧರ್ಮಧಾರಣಾ

ರಸವೆ ಜನನ,
ವಿರಸ ಮರಣ
ಸಮರಸವೇ ಜೀವನ.

(ಅಂಬಿಕಾತನಯ–ಗ

## ೫೭. ಶಬರಿ

ಕಾದಿರುವಳು ಶಬರಿ,
ರಾಮ ಬರುವನೆಂದು,
ತನ್ನ ಪೂಜೆಗೊಳುವನೆಂದು.

ವನವನವ ಸುತ್ತಿ ಸುಳಿದು
ತರು ತರುವನಲೆದು ತಿರಿದು
ಬಿರಿವೂಗಳಾಯ್ದು ತಂದು
ತನಿವಣ್ಗಳಾಯ್ದು ತಂದು.

ಕೊಳದಲ್ಲಿ ಮುಳುಗಿ ಮಿಂದು
ಬಿಳಿ ನಾರುಮಡಿಯನುಟ್ಟು
ತಲೆವಾಗಿಲಿಂಗೆ ಬಂದು
ಹೊಸತಿಲಲಿ ಕಾದು ನಿಂದು

ಎಳಗಾಳಿ ತೀಡುತಿರಲು
ಕಿವಿಯೆತ್ತಿ ಆಲಿಸುವಳು
ಎಲೆಯಲುಗೆ ಗಾಳಿಯಲ್ಲಿ
ನಡೆ ಸಪ್ಪುಳೆಂದು ಬಗೆದು.

# ೩೮. ವಿವಿಧ ನೀತಿಗಳು

ಗುರು ದೈವಂ ವಿದ್ಯಾರ್ಥಿಗೆ |
ತರುಣಿಗೆ ಪತಿ ದೈವಮುಳಿದ ಮನುಜರ್ಗೆಲ್ಲಂ ||
ಪೊರೆವನೆ ದೈವಂ ಜಗದೊಳ |
ಗರಸಿಂಗಂ ಪ್ರಜೆಯೆ ದೈವಮೆಲೆ ಗುಣರತ್ನಾ ||೧||

ವಚನದೊಳಿಹಪರಸುಖಮುಂ |
ವಚನದೊಳಂ ದೈವಗತಿಯು ದುರ್ಗತಿಯಕ್ಕುಂ ||
ವಚನದೊಳರಿಮಿತ್ರತೆಯುಂ |
ವಚನಾಮೃತದಿಂದೆ ತುಷ್ಟನೀಶ್ವರನರಿಯಾ ||೨||

ನಡೆವೆಡೆಯೊಳ್ ನುಡಿವೆಡೆಯೊಳ್ |
ಕೊಡುವೆಡೆಯೊಳ್ ತನಗೆ ಸಿಂದೆ ಪೊರ್ದದ ತೆಱದಿಂ ||
ನಡೆವುದು ನುಡಿವುದು ಕೊಡುವುದು |
ಪಡೆವುದು ಸತ್ಕೀರ್ತಿಯುಂ ವಿದಗ್ಧಲಲಾಮಾ ||೩||

ರಾಗರಸ ಮಿಗಲು ಸಭೆ ತಲೆ |
ದೂಗಲು ತಾ ನುಡಿಯಬಲ್ಲೊಡವನುಡಿಯಿಸಿಸೊಂ ||
ದಾಗದಿರೆ ಸೈತು ಮಾಗಿಯ |
ಕೋಗಿಲೆಯಂತಿಹುದು ಸುಗುಣರತ್ನಕರಂಡಾ ||೪||

ಸಾರಗುಣಿಯೊಡನೆ ದುರ್ಗುಣಿ |
ಘೋರನೆ ಸಲೆ ಪೂಜ್ಯನಹನದೆಂತೆನೆ ಮುಡಿಯೊಳ್ ||
ಸೌರಭ್ಯಕುಸುಮಸಂಗದಿ |
ರುಂ ಸಲುವಂತೆ ಸುಗುಣರತ್ನಕರಂಡಾ ||೫||

ಆಗದರ ಮನವ ಕಂಡೊಡೆ |
ಬೇಗನೆ ತೊಲಗುವುದು ತೊಲಗದಿರ್ದೊಡೆ ಮತ್ತಾ
ನಾಗರ ಹೆಡೆನೆಳಲಾಸೆಗೆ |
ಪೋಗಿ ಸುಖಂಬಾಳ್ವೆನೆಂಬ ಕಪ್ಪೆವೊಲಕ್ಕುಂ

ಹೊನ್ನಮ್ಮ - ಹದಿಬದೆಂ

---

## ೫೬. ಮೂರ್ಖರು

ಸಾಲಮಾಡಿಯೆ ಸರಕು ಕೊಳ್ಳುವ|
ಮುದುಕ ತಾ ಕನ್ಯೆಯನು ವರಿಸುವ |
ತಾನು ನೋಡದ ಗ್ರಂಥ ಟೀಕಿಪ |
ಕಾಂಬ ವಸ್ತುವ ಮರೆಯಮಾಡುವ|
ಮನುಜರಿವರೇ ಮೂರ್ಖರೆನಿಸುವರು

ಲಾಭಕಾಲದಿ ಕಲಹ ತೆಗೆಯುವ |
ಉಂಬ ಸಮಯದಿ ಕೋಪಗೊಳ್ಳುವ |
ಹೊತ್ತನರಿಯದೆ ಹರಟೆ ಹೊಡೆಯುವ |
ಸಮಯ ಬಂದಿರೆ ಸುಮ್ಮನಿರುತಿಹ|
ಮನುಜರಿವರೇ ಮೂರ್ಖರೆನಿಸುವರು

ಲಾಭದಾಶೆಗೆ ಹಣವ ಕಳೆಯುವ |
ಅನ್ಯರೊಂದಿಗೆ ಬಿರುಸನಾಡುವ |
ಮಗಗೆ ಧನವಿತ್ತಧನನಾಗುವ |
ಶತ್ರು ಪಕ್ಷದ ಜನವ ಯಾಚಿಪ |
ಮನುಜರಿವರೇ ಮೂರ್ಖರೆನಿಸುವರು

ಬುದ್ಧಿಗರ್ವದಿ ಹಿತವ ಕೇಳದ |
ಕುಲದ ಮದದಲಿ ಕೆಲಸ ಮಾಡದ |
ಸಿಕ್ಕದೊಡವೆಯನಿತ್ತು ಬಯಸುವ |
ರೋಗಿಯಾಗಿಯು ಪಥ್ಯಮಾಡದ|
ಮನುಜರಿವರೇ ಮೂರ್ಖರೆನಿಸುವರು ||೪||

ದುಃಖವಾಗಲು ದೈನ್ಯ ತೋರುವ |
ಪೂರ್ವ ಕಷ್ಟವ ಸುಖದಿ ಮರೆಯುವ |
ಅಲ್ಪರಕ್ಷೆಗೆ ಅಧಿಕ ವೆಚ್ಚಿಪ |
ಪರಿಕಿಸಲು ವಿಷವನ್ನೆ ಸೇವಿಪ |
ಮನುಜರಿವರೇ ಮೂರ್ಖರೆನಿಸುವರು ||೫||

ಪಂಡಿತನು ನಾನೆಂದು ಹರಟುವ |
ಸುಭಟನೆಂತೆಂದಭಯನಾಗಿಹ |
ತನ್ನ ಹೊಗಳಲು ಮೈಯ ಮರೆಯುವ |
ವಕ್ರವಾಕ್ಯದಿ ಮರ್ಮಭೇದಿಪ |
ಮನುಜರಿವರೇ ಮೂರ್ಖರೆನಿಸುವರು ||೬||

ದೂತನಾಗಿಯು ವಾರ್ತೆಮರೆಯುವ |
ಹಾಡುಹಗಲಲಿ ಕಳವು ಮಾಡುವ |
ಭೂರಿಭೋಜನವಿಕ್ಕಿ ಹೊಗಳುವ |
ಶ್ಲಾಘಿಸಲು ಭೋಜನವ ತೊರೆಯುವ |
ಮನುಜರಿವರೇ ಮೂರ್ಖರೆನಿಸುವರು ||೭||

ಬಿಕ್ಕೆಬೇಡಿ ಸುಭೋಜ್ಯಕೆಳಸುವ |
ಗುರುವೆನಿಸಿ ಕೀಳ್ಗಯ್ಮೆಗಿಳಿಯುವ |
ಕೆಟ್ಟಕೆಲಸವ ಮಾಡೆ ಹೇಸದ |
ಬಿಗುವಿನಿಂದೆ ಸಹಾಯಬೇಡದ |
ಮನುಜರಿವರೇ ಮೂರ್ಖರೆನಿಸುವರು ||೮||

('ಶತಮೂರ್ಖರು' ಎಂಬ ಹೊತ್ತಿಗೆಯಿಂದ)

## ೫೦. ತೆಂಕಣ ಗಾಳಿಯಾಟ

ಬರಲಿದೆ! ಅಹಹಾ! ದೂರದಿ ಬರಲಿದೆ–
ಬಸುಗುಟ್ಟುವ ಪಾತಾಳದ ಹಾವೊ?
ಹಸಿವಿನ ಭೂತವು ಕೂಯುವ ಕೂವೊ?
ಹೊಸತಿದು ಕಾಲನ ಕೋಣನ – ಓವೊ!
ಉಸಿರಿನ ಸುಯ್ಯೋ? – ಸೂಸೂಕರಿಸುತ,

ಬರುವುದು! ಬರಬರ ಭರದಲಿ ಬರುವುದು–
ಬೊಬ್ಬೆಯ ಹಬ್ಬಿಸಿ, ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ,
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ,
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ,

ಬರುತದೆ! ಮೈತೋರದೆ ಬರುತದೆ! ಅದೆ–
ನಡು ಮುರಿಯುತ ನಗನಾವೆಗೆ, ಕೂವೆಗೆ
ಉಡಿಸಿದ ಹಾಯಿಯ ಹರಿಯುತ ಬಿರಿಯುತ,
ಹಡಗನು ಕೀಲಿಸಿ, ತುಮುರನು ತೇಲಿಸಿ,
ದಡದಲಿ ಝಾಡಿಸಿ, ದೋಣಿಯನಾಡಿಸಿ,

ಇದೆ! ಇದೆ! ಬರುತಿದೆ! ಇದೆ! ಇದೆ! ಬರ
ಹಕ್ಕಿಯ ಕಣ್ಣಿಗೆ ಧೂಳಿನ ಕಾಡಿಗೆ
ಇಕ್ಕುತ, ಹೊಲದೆತ್ತಿಗೆ ದನಕಾಡಿಗೆ
ಫಕ್ಕನೆ ಹಟ್ಟಿಗೆ ಅಟ್ಟಿಸಿ, ಕಾಡಿಗೆ
ಸಿಕ್ಕಿದ ಕಿಚ್ಚನು ಊದಲು ಹಾರುತ,

ಬರುತಿದೆ! ಇದೆ! ಇದೆ! ಇದೆ! ಇದೆ! ಬರುತಿದೆ–
ಸಡಿಲಿಸಿ ಮಡದಿಯರುಡಿಯನು ಮುಡಿಯನು,
ಬಡ ಮುದುಕರ ಕೊಡೆಗರಿ ಹರಿದಾಡಿಸಿ,
ಹುಡುಗರ ತಲೆ ತಲೆ ಟೊಪ್ಪಿಯ ಆಟವ
ದಡಬಡನಾಡಿಸಿ, ಮನೆ ಮನೆ ತೋಟವ
ಅಡಿಮೇಲಾಗಿಸಿ, ತೆಂಗನು ಲಾಗಿಸಿ
ಅಡಕೆಯ ಬಾಗಿಸಿ, ಪನೆ ಇಬ್ಬಾಗಿಸಿ,
ಬುಡದೂಟಾಡಿಸಿ, ತಲೆ ತಾಟಾಡಿಸಿ,
ಗುಡಿಸಲ ಮಾಡನು ಹುಲುಹುಲುಮಾಡಿಸಿ,

ಬಂತ್ತೈ! ಬಂತ್ತೈ! ಇದೆ! ಇದೆ! ಬಂತ್ತೈ!–
ಗಿಡ ಗಿಡದಿಂ – ಚೆಲುಗೊಂಚಲು ಮಿಂಚಲು–
ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ,
ಎಡದಲಿ ಬಲದಲಿ ಕೆಲದಲಿ ನೆಲದಲಿ,
ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ,
ಸಿಡಿಲನು ತಾಳಿಗೆ ಬಾಳಿಗೆ ಎರಗಿಸಿ,
ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್
ಕುಡಿ ನೀರನು ಒಣಗಿದ ನೆಲಕೆರೆವೋಲ್
ಬಂತ್ತೈ ಬೀಸುತ! ಬೀಸುತ ಬಂತ್ತೈ!
ತೆಂಕಣ ಗಾಳಿಯು ಕೊಂಕಣ ಸೀಮೆಗೆ!
ಬಂತ್ತೈ! ಬಂತ್ತೈ! ಬಂತ್ತೈ! ಬಂತ್ತೈ!

—ಕವಿಶಿಷ್ಯ

## ೩೧. ಕನ್ನಡತಾಯ ನೋಟ

ಏನು ಚೆಲುವಿನ ನಾಡು! ಚೆಲುವು ಚೆಲ್ಲುವ ನಾಡು! ಕನ್ನಡದ ನಾಡು!
ಏನು ಚಿನ್ನದ ನಾಡು! ನಮ್ಮೊಲುಮೆಯಾ ನಾಡು! ನಮ್ಮಿನಿಯ ನಾಡು!
ಕಾವೇರಿಯಿಂದಮಾ ಗೋದಾವರಿಯ ವರೆಗೆ ಚಾಚಿರುವ ನಾಡು!
ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು,
ಕಾರ್‌ಮೋಡಗಳು ಕಪ್ಪು, ಹೊಳೆಕೆರೆಯ ಮಡು ಕಪ್ಪು, ತಾಯ ಕಾಲ್ ತೊಳೆವ
ಉಪ್ಪು ಕಡಲದು ಕಪ್ಪು, ಜನ ಕಪ್ಪು—ಏನೆಂದೆ? ತಪ್ಪು, ತಪ್ಪು!—
ಮೂಡ ಪಡುವಲು ತಿರುಗು, ಬಡಗ ತೆಂಕಲು ತಿರುಗು, ಕರ್-ನಾಟದಲ್ಲಿ,
ನಿಮ್ಮೂರ ಹೆಣ್ಣುಗಳ ಕಣ್-ನೋಟ, ತಣ್-ನೋಟ ಕರ್ಪುರ, ಬಲು ಕರ್ಪುರ!
ಕರ್ಪೊ, ಬೆಳ್ಪೋ ಕಾಣೆ, ಕನ್ನಡದ ಕಣ್ಣೋಟ-ಕೂರ್ಪುರ, ಆರ್ಪುರ!
ಓ ತಾಯೆ, ಕನ್ನಡದ ಪೆರ್-ತಾಯೆ, ನಮ್ಮಮ್ಮ, ದೇವಿ, ಸಮ್ರಾಜ್ಞಿ,
ಸುಳಿಗುರುಳು, ನಗೆಗಣ್ಣು ಏನು ಕಪ್ಪೇ ನಿನಗೆ—ಮುತ್ತಿಡುವ ಕಪ್ಪು!
ನಿನ್ನ ಕಲಿಗಳ ಕೂರ್ಪುರ, ಕೆಚ್ಚೆದೆಯ ಕಟ್ಟಾಳ ಕೂರ್ಪುರ, ನೆಚ್ಚಾರ್ಪುರ,
ಆರು ತಡೆಯಲುಬಹುದು—ಪುಲಕೇಶಿ ಹರ್ಷರೇ ಹೊಯ್ದು ಸಾರುವರು.
ಕರ್ಪಿರಲಿ, ಕೂರ್ಪಿರಲಿ, ನಿನ್ನ ಬೆಳ್ಪನು ಹೇಳು – ಕೂರಸಿಯ ಮಿಂಚು,
ಕಾರ್-ಮಿಂಚು, ಪೆಣ್ಮಣಿಗಳಾ ಕಣ್ಣ ನುಣ್ಮಿಂಚು, ಅರಿದರಾ ಕೂರ್-ನೋಟ ಮಿಂಚು!
ಮೆಲ್ಲ ಮೆಲ್ಲನೆ ತೇಲಿ, ಆಳದಲಿ ಮಲೆಯೆಡೆಯೊಳಲುಗದೆಯೆ ಅಲುಗಿ,
ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಪಂಗೆಡೆವ ನೀರ್-ಬೀಳ ಬೆಳ್ಪು!
ಕಡೆದ ನೊರೆ, ಚಿಗಿವ ನೊರೆ, ತೂರು ನೊರೆ, ಕುದಿವ ನೊರೆ, ಬೆಳ್ಪಿನೊಳ್ ಬೆಳ್ಪು!
ಆ ಬೆಳ್ಪು, ಆ ತೆಳ್ಪು, ಆ ಮೆಲ್ಪು—ನಿನ್ನ ಮಕ್ಕಳ ಬಾಳಿನೊಳ್ಪು;
ನೀರ್-ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳ್ಪು!

ಬೆಳ್ಗೊಳವೊ, ತೀರ್ಥಗಳೊ, ಧರ್ಮಧರ್ಮದ ತಿರುಳೊ, ಪಾಡುವರ ಪುರುಳೋ,
ಒಳ್ಗನ್ನಡದ ಕಲೆಯೊ, ಕುಸುರಿಗೆಲಸದ ಸಿಲೆಯೊ, ಆ ನಯವೊ, ಮೆರುಗೋ!
ನಿನ್ನ ಚಿಣ್ಣರ ಸೊಬಗೊ, ಬೆಡಗೊ, ಪೆಳ್ಳದೆ ತಣ್ಪೊ, ಕೊಡುಗೈಯ ಬಿಣ್ಪೋ!
ಓ ಎನ್ನ ತಾಯಿ, ಕನ್ನಡ ತಾಯಿ, ನಮ್ಮವ್ವ, ದೇವಿ, ಸಮ್ರಾಜ್ಞಿ,
ನಿನ್ನನರಸುತ ಸುಳಿವ, ನೋಂಪಿಯೆನೆ ನಿನ್ನೊಲುಮೆ-ನಾಡನೊಳಕೊಳುವ,
ನಿನ್ನ ಚೆಲುವನು ಸವಿವ ಮಗುವಾರು ತಣಿಯದನು, ಹಾಡಿ ಕುಣಿಯದನು,
ಭಕ್ತಿಯಲಿ ತಲೆದೂಗಿ ಬಾಗಿ ಮಣಿಯದನು!

--ಶ್ರೀ

---

## ೫೨. ವನಸುಮ

ವನಸುಮದೊಲೆನ್ನ ಜೀ
ವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ-ಹೇ ದೇವ
ಜನಕೆ ಸಂತಸವೀವ
ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್ ಬಿಡದೆ

ಕಾನನದಿ ಮಲ್ಲಿಗೆಯು
ಮೌನದಿಂ ಬಿರಿದು ನಿಜ
ಸೌರಭವ ಸೂಸಿ ನಲವಿಂ
ಕಾನೆಲೆಯ ಪಿಂತಿರ್ದು
ದೀನತೆಯ ತೋರಿ ಅಭಿ
ಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ

ಉಪಕಾರಿ ನಾನು ಎ
ನ್ನುಪಕೃತಿಯು ಜಗಕೆಂಬ
ವಿಪರೀತ ಮತಿಯನುಳಿದು
ವಿಪುಲಾಶ್ರಯವನೀವ
ಸುಫಲ ಸುಮಭರಿತ ಪಾ
ದಪದಂತೆ ನೈಜವಾದೊಳ್ಪಿನಿಂ ಬಾಳ್ವವೊಲು

—ಡಿ. ವಿ. ಗುಂಡಪ್ಪ



## ೫೩ ಭರತನ ಭಕ್ತಿ

ಅರಸಡವಿಗೈದಿದೊಡಮ್, ಅವನಿತ್ತ ಪಾದುಕೆಗ ।
ಳೊರೆಯದೊಡಮೇನನುಂ, ತಾಂ ವರದಿಯೊರೆದು ॥
ದೊರೆತನದ ಭಾರವನು ಹೊತ್ತು ದೊರೆಯಾಗದಾ ।
ಭರತನವೊಲಿರು ನೀನು– ಮಂಕುತಿಮ್ಮ ॥೧

ಒಡೆಯನೆಂದೋ ಬಂದು ಕೇಳ್ವನದಕುತ್ತರವ ।
ಕೊಡಬೇಕು ತಾನೆನುವವೊಲು ಋಜುತೆಯಿಂದ ॥
ಒಡಲ ಜಾಣಿನ, ಜೀವಶಕ್ತಿಗಳನೆಲ್ಲವನು ।
ಮುಡುಪುಕೊಟ್ಟನು ಭರತ– ಮಂಕುತಿಮ್ಮ ॥೨

ಒಡರಿಸುವನೆಲ್ಲಹನ್, ಅದಾವುಮಂ ತನದಲ್ಲ ।
ಬಿಡನೊಂದನುಂ ರಾಜ್ಯ ತನದಲ್ಲವೆಂದು ॥
ನಡೆವಂ ಸ್ವತಂತ್ರದಲಿ ಸಲಿಸುತೆ ವಿಧೇಯತೆಯ ।
ಕಡುಯೋಗಿ ಭರತನಲ ?– ಮಂಕುತಿಮ್ಮ ॥೩

ದೊರೆತನದ ಜಟಿಲಗಳ, ಕುಟಿಲಗಳ, ಕಠಿನಗಳ |
ಭರತನುಳಿಸಿದನೆ ರಾಮನ ತೀರ್ಪಿಗೆಂದು ? ||
ಅರಿವಿಗಿಹ ಕರ್ತವ್ಯಭಾರವನು ತಾನರಿತು |
ಧುರವ ಧರಿಸಿದನವನು- ಮಂಕುತಿಮ್ಮ ||೪||

ಪ್ರತ್ಯಕ್ಷವಿಲ್ಲದಾ ಸ್ವಾಮಿಯಂ ನೆನೆನೆನೆದು |
ಸತ್ಯಭಕ್ತಿಯ ಸೇವೆಗೆಯ್ದವಂ ಭರತಂ ||
ನಿತ್ಯಜೀವನದಿ ನೀನಾನಯವನನುಸರಿಸೊ |
ಸತ್ವದಾಶೆಯ ನೀಗಿ- ಮಂಕುತಿಮ್ಮ ||೫||

ಧರೆಯೆ ಕೋಸಲ, ಪರಬ್ರಹ್ಮನೇ ರಘುವರನು |
ಭರತನವೊಲನುಪಾಲನ ಕ್ರಿಯರು ನಾವು ||
ಅರಸನೂಳಿಗ ನಮ್ಮ ಸಂಸಾರದಾಡಳಿತ |
ಹರುಷದಿಂ ಸೇವಿಸೆಲೊ- ಮಂಕುತಿಮ್ಮ ||೬||

( ಡಿ. ವಿ. ಗುಂಡಪ್ಪ—ಮಂಕುತಿಮ್ಮನಕಗ್ಗ )

—◆◆*◆◆—

## ೫೪. ಗೊಲ್ಗೊಥಾ

ಅಂದಿದೊ ವಸಂತಪೂರ್ಣಿಮಿಯ ಭೃಗುವಾರದಾ
ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳಿವಿಲ್ಲ ;
ನೋಡೊಂದೆ ಬರವೋಡ ಬಾನಗಲ ಚಾಚಿ ನೋ
ಹನ ಕಾಲದಾ ಪ್ರಲಯಮೇಘಮೆನೆ ಮುಚ್ಚಿಹುದು ;
ಬೇಗೆಯಂ ತಡೆಯಲಾಗದು, ಗಾಳಿ ಸೂಸದಿಳೆ ೫

ಯುಬ್ಬಸದೊಳೇದುತಿದೆ, ಮರಗಳಲಿ ಕದಲದೆಲೆ,
ಹಕ್ಕಿಗಳ ಉಸುರಿಲ್ಲ ; ನಟ್ಟಿರುಳೊಳಂತೆ ಮನೆ
ಮನೆಯೊಳುಸಿಕನೆ ಸಂತಮಿರತಕ್ಕ ಜನಪದಂ,
ಧಗೆಯ ಹೆಬ್ಬಾವಂತೆ ಹೊರಟು ತಿಂತಿಣಿವರಿದು
ಬಂತು ಶಲಭಸಮೂಹದಂತೆ ಯೆರೂಸಲೇಮ್
ನಗರದಗಸೆಯ ಹೊರಗಿರುವ ಕಪಾಲಸ್ಥಾನ
ವೆಂಬುವಾ ಗೊಲ್ಗೊಥಾ ಗಿರಿಗೆ. ಬಂದಿಗಳಿಂದ
ಹೊರಿಸಿ ತಂದಾ ಮೂರು ಸಿಲುಬೆಗಳ ನಟ್ಟರಾ
ಗೊಲ್ಗೊಥದ ಶಿಖರದಲಿ ; ಯೇಸುವಂ ನಡುವೆ ಮೇ
ಣೆಡಬಲದೊಳಾ ಕಳ್ಳರಿಬ್ಬರಂ ಸಿಲುಬೆಗಳಿ
ಗಿಕ್ಕಿ, ಕೈಕಾಲ್ಗಳಿಗೆ ಮೊಳೆ ಜಡಿದು, ಯೇಹೂದ್ಯ
ರರಸನೀ ನಜರಾಯ ಯೇಸುವೆಂದಾ ಬರೆದ
ಹಲಗೆಯಂ ತಲೆಗಡೆಗೆ ತೂಗಿದರು. ಹದ್ದು ಬಿಗಿ
ಪಿಡಿದ ಲಾವಿಗೆಯಂತೆ, ಪಡುವಣದಿ ಬಿಳಿಯ ಬಿದಿ
ಗೆಯ ತಿಂಗಳಂತೆ, ಬಿಲ್ಲಿಗೆ ತೊಟ್ಟ ಸರಳಂತೆ,
ಮರಣವೃಕ್ಷದೊಳಮೃತಫಲದಂತೆ ತೂಗುತಿರೆ,
ತನ್ನ ಬೇನೆಯನಣಂ ಗಣಿಸದವನುಸುರಿದಂ—
ನರದೇಹವೆತ್ತವನಿಗಾ ತನುವ ಗುಣಧರ್ಮ
ವಹ ಬೇನೆ ಇಲ್ಲದಿಹುದೆಂತು? ತಾನಾರ ತನು
ಮನವನಿನಿಸಾದೊಡಂ ನೋಯಿಸಿಲ್ಲೆಂದು ಸಾ
ವಿರ ಚೇಳ್ಗಳೊಮ್ಮೆಗಕಟಾ ಕಡಿವ ಯಾತನೆಯ
ಸಿಲುಬೆಯುಳಲುರಿಯ ತಣ್ಣನೆ ತಳೆದು, ತಾಯಮೊಗ
ನೋಡೆ ಮಗು ಬಿಸಲಳಲನೋತು ಸೈರಿಸುವಂತೆ,
ಜೋಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂ
ಗಾದಾಡಿ ಮಡಿದು ಜಯವಡುವಂತೆ, ನರನರಂ
ಗಳಲಿ ಕುದಿಕುದಿವ ವೇದನೆ ಸೋಸಿ, ತನ್ನ ತೊಳಿ
ದರ್ಭಕರ ಹಂಬಲಿಸುವ ಮುಮೂರ್ಷು ತಾಯಂತೆ,

ತನ್ನ ಕಡಿವವರ್ಗೆ ತಣ್ಣೆಳಲೀವ ಮರದಂತೆ,
ತನ್ನಳಲನವರ ಹಂಬಲದಿ ಮರೆತುಸುರಿದಂ—
“ಕ್ಷಮಿಸಿವರನೆಲೆ ತಂದೆ! ತಾವೇನನೆಸಗಿದಪೆ
ವೆಂದರಿಯರಿವರು.’ ನೆರೆದವರದಂ ಕೇಳ್, ‘ಹಾ!
ನಮಗಾಗಿ ಕ್ಷಮೆಯ ಯಾಚಿಸುವುದಂತಿರಲಿ; ನೀ
ದೇವಸುತನಾಗಿದ್ದರೀ ಸಿಲುಬೆಯಿಂದಿಳಿದು
ಬಾರ ನೋಡುವ!’ ಎಂದು ಜಟಕರಿಸೆ, ಯಾಜಕರು
‘ಅನ್ಯರಂ ರಕ್ಷಿಸಿದಿವಂ ತನ್ನ ತಾನೆ ರ
ಕ್ಷಿಸಲಾರನಾದನೆ? ಯೆಹೂದ್ಯರರಸಂತೆ! ತಾ
ನಿಳಿತರಲಿ ಸಿಲುಬೆಯಿಂದೊಡನೆ ನಂಬುವೆವಿವನ!
ದೇವರೊಳ್ ಭರವಸಿಗನಂತೆ! ಕಾಂಬೆವು ದೇವ
ರೀತನಂ ರಕ್ಷಿಸಲಿ! ದೇವಸುತ ತಾನೆಂದ
ನಲ್ಲ!’ ಎಂದಣಕಿದರು.
ಅನಿತರೊಳ್ ಬಿರುಗತ್ತ
ಲೊಂದು ಬಾನೆಲ್ಲವಂ ಬಾಸಣಿಸಿ, ದೇವಸುತ
ನಮೃತನೀ ಮೃತಿನಾಟಕದ ಕಡೆಯ ತೆರೆಯಂತೆ
ಭೂವ್ಯೋಮಗಳ ನಡುವೆ ಮುಸುಕಿದುದು. ಸೂರ್ಯೋಪ
ರಾಗಮೇನಿಂದು ಹುಣ್ಣಿಮೆಯೊಳೆನೆ ನಕ್ಷತ್ರ
ವೊಂದಿಲ್ಲ. ಮಳೆಯ ಕತ್ತಲೆಯೊ? ಕತ್ತಲ ಮಳೆಯೊ?
ಅಲ್ಲದೆ ನಭೋಗ್ನಿಮುಖಿಯಿಂದುಗುವ ಕಬ್ಬೊಗೆಯೊ?
ಮಿಸ್ರದೊಂಬತ್ತನೆಯ ಮಾರಿ ತಲೆದೋರಿತೇ?
ಹಗಲ ಮೂರನೆಯ ಜಾಮದೊಳ್ ಹಗಲಿನ ದೀಪ
ವಾರಿತೇನೆಂದು ನೆರೆದವರೆಲ್ಲರೆದೆ ನಡುಗೆ,
ಸಿಲುಬೆಯೊಳೆಲೀ! ಎಲೀ! ಲಮ್ಮಾ ಸಬಕ್ತಾನಿ?
(ದೇವರೇ! ದೇವರೇ! ಯಾಕೆನ್ನ ಕೈಬಿಟ್ಟೆ?)
ಎಂದು ದಾವೀದ ನೃಪನಂದಿನಾರ್ತಧ್ವಾನ
ದಿಂದರಚಿ ಯೇಸು, ನಿಂದವರಲ್ಲಿ ಕೆಲವರಿವ

ನೇಲೀಯನಂ ಕರೆವನೇಲೀಯನೇಂ ಬಂದು
ಕಾದಪನೊ ಕಾಂಬೆವೆನೆ, ಮೇಘನಿರ್ಘೋಷದಿಂ
'ತಂದೆಯೆ! ಮಮಾತ್ಮವಂ ನಿನ್ನ ಕೈಗೊಪ್ಪಿಸುವೆ!'
ಎಂದು ಗಗನದಿ ಯೇಸ ಕಣ್ಣೂರಿ, ತುದಿಬೆಟ್ಟ
ದಿಂ ಕರೆವ ತಾಯೆಡೆಗೆ ಮರಿಜಿಂಕೆ ಜಿಗಿವಂತೆ,
ಸುಗ್ಗಿಯೆಡೆಗಯ್ದುವಾ ಬಾನಕ್ಕಿಯಂತೆ, ದಿನ!
ಮುಖದೊಳಿರುಳಿನ ಸೊಡರು ನೇಸರಂಬುಗುವಂತೆ,
ಕ್ಷಿತಿಜದಿಂ ಸಿಡಿದು ಮೇಲ್ನೆಗೆವ ಮಿಂಚಂತೆ, ಯೇ
ಸುವಿನಾತ್ಮವೊಡನೆ ಬೆಳಕಿನ ಬೀಡಿಗಯ್ದೆ, ನಿಲು
ನೇಸರುಗಳೆಡೆಗಯ್ದೆ, ಕಣ್ಮುಗಿದು ತಲೆವಾಗಿ,
ತನ್ನ ಪಡೆದೆರವನೊಡೆಯಂಗೆ ಮರಳೀವಂತೆ
ತನ್ನ ತಂದೆಗೆ ಯೇಸುವಸುವನೊಪ್ಪಿಸಿದಂ.
ಗಡಗಡನೆ ಭೂಮಿ ನಡುಗಿತು, ದುಃಖವಾರ್ತೆಯಂ
ಜಗಕೆಲ್ಲ ಕೇಳಿಸುವ ಮರಣದುಂದುಭಿಯಂತೆ.
ನೆರೆದರೆದೆಯೆದೆ ಭೀತಿಯಿಂದ ಮಾರ್ಮೊಳಗಿದುದು.
ಕಾವಲಿನ ರೋಮಕ ಶತಾಧಿಪತಿ ಕುದುರೆಯಲಿ
ಜೂಗಳಿಸೆ, ಕೆಳಗಿಳಿದು ಸೀಸಕಂ ತೆಗೆದಿವಂ
ದೇವತನಯಂ ಗಡಾ! ಎಂದು ವಿಸ್ಮಯದೊಳಾ
ಹಗಲ ತಿಂಗಳನೆ ಎವೆಯಿಕ್ಕದೀಕ್ಷಿಸಿದಂ.

—ಗೋವಿಂದ ಪೈ



## ೫೫. ಹಕ್ಕಿ ಹಾರುತಿದೆ ನೋಡಿದಿರಾ ?

ಇರುಳಿರುಳಳಿದು ದಿನ ದಿನ ಬೆಳಗೆ
ಸುತ್ತು ಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆತೆರೆದಿಕ್ಕುವ ಹೊತ್ತಿನ ಒಳಗೆ
ಹಕ್ಕಿ ಹಾರುತಿದೆ ನೋಡಿದಿರಾ ?

ಕರಿನರೆ ಬಣ್ಣದ ಪುಚ್ಚಗಳುಂಟು
ಬಿಳಿ-ಹೊಳೆ ಬಣ್ಣದ ಗರಿ-ಗರಿಯುಂಟು
ಕೆನ್ನನ ಹೊನ್ನನ ಬಣ್ಣ-ಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿ ಹಾರುತಿದೆ ನೋಡಿದಿರಾ ?

ನೀಲಮೇಘಮಂಡಲ ಸಮ ಬಣ್ಣ !
ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ !
ಚಿಕ್ಕೆಯ ಮಾಲೆಯ ಸೆಕ್ಕಿಸಿಕೊಂಡು
ಸೂರ್ಯ-ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ ನೋಡಿದಿರಾ ?

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲ ಗಿಂಡಲಗಳ ಗಡ ಮುಕ್ಕಿ
ತೇಲಿಸಿ ಮುಳುಗಿಸಿ ಖಂಡ-ಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ
ಹಕ್ಕಿ ಹಾರುತಿದೆ ನೋಡಿದಿರಾ ?

ಯುಗ-ಯುಗಗಳ ಹಣೆಬರಹವ ಒರಸಿ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನಗೊಳಿಸಿ
ಹೊಸಗಾಲದ ಹಸುಮಕ್ಕಳ ಹರಸಿ
ಹಕ್ಕಿ ಹಾರುತಿದೆ ನೋಡಿದಿರಾ?

ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ
ತಿಂಗಳಿನೂರಿನ ನೀರನು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳಲೋಕದ ಅಂಗಳಕೇರಿ
ಹಕ್ಕಿ ಹಾರುತಿದೆ ನೋಡಿದಿರಾ?

ಮುಟ್ಟಿದೆ ದಿಙ್ಮಂಡಲಗಳ ಅಂಚ
ಆಚೆಗೆ ಚಾಚಿದೆ ತನ್ನಯ ಚುಂಚ
ಬ್ರಹ್ಮಾಂಡಗಳನು ಒಡೆಯಲು ಎಂದೋ
ಬಲ್ಲರು ಯಾರಾ ಹಾಕಿದ ಹೊಂಚ
ಹಕ್ಕಿ ಹಾರುತಿದೆ ನೋಡಿದಿರಾ?

(ಅಂಬಿಕಾತನಯ-ಗರಿ)



# ೫೭. ನನ್ನ ಹಾಡು

ನನ್ನ ಹರಣ
ನಿನಗೆ ಶರಣ
ಸಕಲ ಕಾರ್ಯಕಾರಣಾ
ನಿನ್ನ ಮನನ
ದಿಂದ ತನನ-
ವೆನುತಿದೆ ತನು ಪಾವನಾ.

ಸುಖದ ಮಿಷವು
ದುಃಖ ವಿಷವು
ಹಿಗ್ಗಿ ಪ್ರಾಣ ಪೂರಣಾ
ಪಂಚಕರಣ
ಗಳೀ ಗಡಣ
ಕಟ್ಟಿತು ಗುಡಿ ತೋರಣಾ.

ನಿನ್ನ ಚರಣ
ಸುಸಂತರಣ
ಜಗದ್ಭರಿತ ಭಾವನಾ
ಹಾಸ್ಯಕಿರಣ
ತದನುಸರಣ
ತದಿತರ ಪಥ ಕಾಣೆ ನಾ.

ಹರುಷ ರಸವೆ
ಕರುಣದಸುವೆ
ಜೀವಧರ್ಮಧಾರಣಾ

ರಸವೆ ಜನನ,
ವಿರಸ ಮರಣ
ಸಮರಸವೇ ಜೀವನ.

(ಅಂಬಿಕಾತನಯ-ಗರಿ)

## ೫೭. ಶಬರಿ

ಕಾದಿರುವಳು ಶಬರಿ,
ರಾಮ ಬರುವನೆಂದು,
ತನ್ನ ಪೂಜೆಗೊಳುವನೆಂದು.

ವನವನವ ಸುತ್ತಿ ಸುಳಿದು
ತರು ತರುವನಲೆದು ತಿರಿದು
ಬಿರಿವೂಗಳಾಯ್ದು ತಂದು
ತನಿವಣ್ಗಳಾಯ್ದು ತಂದು.

ಕೊಳದಲ್ಲಿ ಮುಳುಗಿ ಮಿಂದು
ಬಿಳಿ ನಾರುಮಡಿಯನುಟ್ಟು
ತಲೆವಾಗಿಲಿಂಗೆ ಬಂದು
ಹೊಸತಿಲಲ್ಲಿ ಕಾದು ನಿಂದು

ಎಳಗಾಳಿ ತೀಡುತಿರಲು
ಕಿವಿಯೆತ್ತಿ ಆಲಿಸುವಳು
ಎಲೆಯಲುಗೆ ಗಾಳಿಯಲ್ಲಿ
ನಡೆ ಸಪ್ಪುಳೆಂದು ಬಗೆದು,

ದೂರಕ್ಕೆ ನೋಳ್ಪೆನೆಂದು
ಮರವೇರಿ ದಿಟ್ಟಿಸುವಳು
ಗಿರಿಮೇಲಕ್ಕೈದಿ ಕೈಯ
ಮರೆಮಾಡಿ ನೋಡುತಿಹಳು.

ಬಾ ರಾಮು, ರಾಮು ಎಂದು
ಬರುತಿಹನು, ಇಹನು ಎಂದು
ಹಗಲಿರುಳು ತವಕಿಸಿಹಳು
ಕಳೆದಿಹವು ವರುಷ ಹಲವು.

× × ×

ಶಬರಿವೊಲು ಜನವು ದಿನವು
ಯುಗ ಯುಗವು ಕರೆಯುತಿಹವು
ಕರೆ ಇಳೆಗಳೇಳಲರಸ
ತವಕದಲಿ ತಪಿಸುತಿಹುದು.

ಭರವಸೆಗಳಳಿಯುವಾಗಿ
ಮನವೆಲ್ಲ ಬಯಕೆಯಾಗಿ
ಹಗಲೆಲ್ಲ ಕಾದು ಕೂಗಿ
ಇರುಳೆಲ್ಲ ಜಾಗರಾಗಿ ;

ಬಂದಾನೊ ಬಾರನೋ ಓ
ಕಂಡಾನೊ ಕಾಣನೋ ಓ
ಎಂದೆಂದು ತಪಿಸಿ ಜಪಿಸಿ
ಶಂಕಾತುರಂಗಳೂರಿ.

ಬಾ ರಾಮು, ಬಾರ, ಬಾರಾ
ಬಡವರನು ಕಾಯು ಬಾರಾ
ಕಂಗಾಣದಿವರ ಪ್ರೇಮ
ನುಡಿಸೋತ ಮೂಕ ಪ್ರೇಮ.

—(ವಿ. ಸಿ. – ನೆಳಲು ಬೆಳಕು)

## ೫೮. ಕನ್ನಡ ನಾಡಿನ ಸ್ಥಿತಿಯನ್ನು ನೆನೆದು

ಹರಿದು ತುಂಡಾಗಿಹುದು ಇಂದು ಕನ್ನಡನಾಡು ;
ಅಣ್ಣತಮ್ಮದಿರು ತಾವಣ್ಣತಮ್ಮದಿರೆಂದು
ತಿಳಿಯಲಾರರು ನಡೆಯಲಾರರು ; ಬಾ ಬಂಧು
ಎಂದು ಕರೆಯಲು, ಸ್ವಾಮಿ ನಮ್ಮೂರು ಧಾರ್ವಾಡ
ನಮ್ಮೂರು ಮೈಸೂರು, ನಮ್ಮೂರು ಎರಕಾಡು
ಮರ್ಯಾದೆಯಿಂದ ಕರೆಯಿರಿ ನನ್ನ ಎನ್ನುವರು.
ಕನ್ನಡದ ನಾಡ ಜನವೆಲ್ಲವೂ ನನ್ನವರು,
ಬಡಗ ತೆಂಕಣ ಮೂಡ ಕೊಡಗ ತೌಳವ ತೋಟ
ಇನ್ನೆಲ್ಲ ಕನ್ನಡಿಗರೆನ್ನವರು ಎನ್ನುಸಿರು,
ನಾವೆಲ್ಲ ಒಂದು ಮನೆಯವರಣ್ಣ ತಮ್ಮದಿರು,
ನಮ್ಮೆಲ್ಲರನು ಪಡೆದುದೊಂದೆ ನಾಡಿನ ಬಸಿರು,
ಎಂದು ನಾವರಿದೆವೇ ನಮಗೆ ಇನ್ನಾರೆದುರು !
ಹಾ ನನ್ನ ಸೋದರರೆ ಬನ್ನಿ ಒಂದಾಗಿ ;
ಜಯವಧುವ ನಿಮ್ಮ ತೋಳಿನೊಳಿಟ್ಟು ತೂಗಿ.

—ಶ್ರೀನಿವಾಸ



## ೫೯. ಕುಮಾರವ್ಯಾಸ

ಕುಮಾರವ್ಯಾಸನು ಹಾಡಿದನೆಂದರೆ,
ಕಲಿಯುಗ ದ್ವಾಪರವಾಗುವುದು !
ಭಾರತ ಕಣ್ಣಲಿ ಕುಣಿವುದು ; ಮೈಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು !
ಆ ಕುರುಭೂಮಿಯು ತೋರುವುದು ;

ಆ ರಣರಂಗದಲಿ,
ಆ ಸಂಗ್ರಾಮದಲಿ,
ಪಟುಭಟರಾರ್ಭಟ ಕೇಳುವುದು !
ಮೈ ನವಿರೇಳುವುದು !
ಹೊಳೆಯುವ ಕೈದುಗಳಾಟದಲಿ,
ಕಲಿಗಳ ಕದನದ ಕೂಟದಲಿ,
ತಾಗುವ ಗದೆಗಳ ಸಂಘಟ್ಟಣೆಯಲಿ,
ರಥಚಕ್ರಧ್ವನಿ ಚೀತ್ಕಾರದಲಿ,
ಸಾಯ್ವರ ಶಾಪದಲಿ,
ಬೀಳ್ವರ ತಾಪದಲಿ
ನಶುಸೋತಿರುವರ ಕೋಪದಲಿ,
ನೆರೆ ಗೆದ್ದಿಹರಾಟೋಪದಲಿ,
ಕೆನೆಯುವ ಹಯಗಳ ಹೇಷಾರವದಲಿ,
ಕಿವಿ ಬಿರಿಯುವುದು !
ಎದೆ ಮುರಿಯುವುದು !
ಬಸಿಯುವ ಮಜ್ಜೆಯ ಪಂಕದೊಳೂಡಿ
ಚಿಮ್ಮುವ ರಕ್ತದ ಬುಗ್ಗೆಯ ನೋಡಿ
ಕಣ್ಣೊಡೆಯುವುದು !
ಮೈ ನಡುಗುವುದು !
ಕೇಳಿರಿ ! ಪಾರ್ಥನ ಸಾರಥಿಯು
ರಣ ಗೀತೆಯನು,
ರಣ ನೀತಿಯನು,
ಬೋಧಿಸುವನು ನಿರ್ಭೀತಿಯನು !
ಕುರುರಂಗದ ಶರಶಯ್ಯೆಯಲಿ
ಭೀಷ್ಮನು ಮಲಗಿಹನು !
ಹೆಣಗಳ ಬಣಬೆಯ ಮಂಚದಲಿ
ದ್ರೋಣನು ಬಿದ್ದಿಹನು !
ನೆತ್ತರವೀಂಟುತಲಿರುವನು ಭೀಮನು
ಅಯ್ಯೋ, ನೋಡಲ್ಲಿ !

ರಥದಿಂದುರುಳುತಲಿರುವನು ಕರ್ಣನು,
ಹಾ! ಹಾ! ನೋಡಿಲ್ಲಿ!
ರಣಚಂಡಿಯು ಆ ಬೆಂಕಿಯ ಮಗಳು
ಹೆಣ್ಣಿನ ರೂಪದ ಬರಸಿಡಿಲವಳು!
ಮುಗುಳ್ನಗೆ ಬೀರುತ ನೋಡಿಲ್ಲಿ
ನಿಂತಿರುವಳು ರಣರಂಗದಲಿ
ದ್ರೌಪದಿ ಮುಡಿಗೆದರಿ!

ವೈಶಂಪಾಯನ ಸರಸಿಯ ತೀರದಿ
ತೋರುವರಾರಲ್ಲಿ!
ಕೌರವದೇವನು ಸಿಡಿಲಾಗಿರುವನು
ಭೀಮನ ಸರಿಸದಲಿ!
ವೈರಿಯ ಎದೆಯನು
ಒಡೆಯುವ ಗದೆಯನು
ಮೇಲೆತ್ತಿರುವನು ನೋಡಲ್ಲಿ!
ಭೀಮನು ಬಿದ್ದನೆ!
ಕೌರವ ಗೆದ್ದನೆ!
ಮುಂದಾಗುವುದನು ಕಾಣಲ್ಲಿ!
ಇದಾವ ನ್ಯಾಯ!
ಏನನ್ಯಾಯ!
ಕೃಷ್ಣನ ಕುಹಕವ ನೋಡಲ್ಲಿ!
ಏನನು ನೋಡುವೆ? ತಡೆಯುವೆ ಏಕೆ?
ಕೌರವರಾಯನು ಮಡಿಯಲೆ ಬೇಕೆ?

ಯುವಕನೆ ತುಡುಕು ಕಠಾರಿಯನು!
ಹೊಡೆ ರಣಭೇರಿಯನು!
ನಡೆ, ನಡೆ, ಊದು ತುತೂರಿಯನು!
ಕರೆ, ರಣಮಾರಿಯನು!

ಕುಮಾರವ್ಯಾಸನು ಹಾಡಿದನೆಂದರೆ,
ಕಲಿಯುಗ ದ್ವಾಪರವಾಗುವುದು!

ಭಾರತ ಕಣ್ಣಲಿ ಕುಣಿವುದು ಮೆಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು!
ಕಲಿ ಕೆಚ್ಚಾಗುವನು!
ಕವಿ ಹುಚ್ಚಾಗುವನು!

—ಕೆ. ವಿ. ಪುಟ್ಟಪ್ಪ



# ೭೦. ಊರ್ಮಿಳೆ

ನೀರವ ಧ್ಯಾನವಧೂ ಹೇ ಊರ್ಮಿಳಾ ದೇವಿ,
ಸೌಮಿತ್ರಿಯರ್ಧಾಂಗಿ, ಹೇಳು ನೀನೆಲ್ಲಿರ್ದೆ
ಕಡೆದ ಕಡಲೋಲಯೋಧ್ಯಾನಗರಂ ಮಸಗಿದಾ
ಕ್ರಾಂತಿ ದಿನದಂದು? ನಿನ್ನೆರ್ದೆವೂವಿನಾ ವೇಧೆ
ಜಗುಳ್ದುದಿಲ್ಲವೆ ತುಳ್ಕಿ ನೇತ್ರಶತಪತ್ರದಿಂ?
ಪೆಣ್ತನಂ ತಾನೆ ನೀನಲ್ಲದೂರ್ಮಿಳೆಯಲ್ತು:
ಪೆಣ್ಣೆಂಬ ತಪಕೆ ನೀಂ ನಿರುಪಮಪ್ರತಿಮೆಯಾ!
ಕಾಂತನೊಡನಿರ್ದು ಕಾಂತಾರ ವೈವಿಧ್ಯಮಂ
ಸವಿವ, ಲಂಕೆಯೊಳಿರ್ದು ಹದಿಬದೆಯ ಸಾಹಸದ
ರಸಕೆ ಬಾಳಂ ಬೇಳ್ವ, ದೇವ ಮಾನವ ಸಕಲ
ಲೋಕ ಸಂಸ್ತುತಿಯ ಬೆಂಬಲದ ಸೀತೆಯ ತಪಕೆ
ಮಿಗಿಲ್ ನಿನ್ನ ಅಖ್ಯಾತವಾ ದೀರ್ಘ ಮೌನವ್ರತಂ,
ಮೂಕಸತಿ ಹೇ ಗೋಚರಾತೀತೆ! ಕಲ್ಲಾಗಿ
ಬಿಳ್ದಹಲ್ಯೆಯ ಶಿಕ್ಷೆಗಿರ್ದತ್ತು ಚೇತನದ
ರಕ್ಷೆ: ನೀನುಸಿರೆಳೆದುಮುರೆಬಂಡೆಯೋಲಂತೆ
ಪದಿನಾಲ್ಕು ಬರಿಸವಾಶಂಕೆಯ ನಿರೀಕ್ಷಣೆಯ
ಭೀತಿ ಖಿನ್ನತೆ ಹತಾಶತೆಗಳೈವುರಿ ನಡುವೆ

ತಪಮಿರ್ದುಮೊಡೆಯದಿರ್ದುದ ನೆನೆಯಲದೆ ಮಹಾ
ವ್ರತಮಪ್ಪುದಿತರ ಜೀವರಿಂಗೆ. —ಸೌಮಿತ್ರಿ ತಾಂ
ನಿನ್ನ ಸುಮತಿಯನಣ್ಣನೊಡನಡವಿಗೈದಲ್ಕೆ ಪೇಳ್
ಬೇಡಿದನೆ ? ಭ್ರಾತೃಭಕ್ತಿಯ ಸಂಭ್ರಮಾಧಿಕ್ಯದೊಳ್
ಪ್ರೀತಿಯಿಂ ಬೀಳ್ಕೊಳ್ವುದಂ ತಾಂ ಮರೆಯನಲ್ತೆ ?
ಮರೆಯನೆಂದುಂ ಸುಮಿತ್ರಾತ್ಮಜಂ ! ಪೇಳ್ದನೇನಂ,
ಪೇಳ್, ಬನಕೆ ನಡೆವಂದು? ಪೇಳ್ವಳೆಂತಯ್ ಮಂತ್ರಮಂ,
ತನ್ನ ಪತಿ ಗುರುತಪಕೆ ದೀಕ್ಷೆಯಿತ್ತುದನವಳ್,
ಸತಿ ಶಿರೋಮಣಿ, ಊರ್ಮಿಳಾದೇವಿ ? ಪ್ರಾಣೇಶ
ಲಕ್ಷ್ಮಣಂ ರಾಮ ಸೀತೆಯರೊಡನಯೋಧ್ಯೆಯಂ
ಬಿಟ್ಟಂದುತೊಟ್ಟು, ಸರಯೂನದಿಯ ತೀರದೊಳ್
ಪರ್ಣಕುಟಿಯಂ ರಚಿಸಿ, ಚಿರ ತಪಸ್ವಿನಿಯಾಗಿ
ಕಟ್ಟಿದಳ್ ಚಿತ್ತಪ್ರೇಮಂಗಳದ ರಕ್ಷೆಯಂ
ಮೈಥಿಲಿಗೆ ರಾಮಂಗೆ ಮೇಣ್ ತನ್ನಿನಿಯ ದೇವನಿಗೆ !

— ಕೆ. ವಿ. ಪುಟ್ಟಪ್ಪ

~~~~~~~~~~~~

# ೭೧. ಕನ್ನಡ ಪದಗೊಳು

ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ !
ಖುಂಡೇನ್ ಎತ್ತಿ ಕುಡದ್ಬುಟ್ಟಾಂದ್ರೆ-
ತಕ್ಕೊ ! ಪದಗೊಳ್ ಬಾಣ !
ಬಗವಂತ್ ಏನ್ರ ಭೂಮಿಗ್ ಇಳದು
ನನ್ ತಾಕ್ ಬಂದಾಂತ್ ಅನ್ನಿ ;
ಪರ್‌ಗಿರೀಕ್ಸೆ ಮಾಡ್ತಾನ್ ಔನು-
ಬಕ್ತನ್‌ಮೇಲ್ ಔನ್ ಕಣ್ಣು !
~~~~~~~~~~~~

‘ ಯೆಂಡ ಕುಡಿಯಾದ್ ಬುಟ್‌ಬುಡ್ ರತ್ನ ! ’
ಅಂತ್ ಔನ್ ಏನಾರ್ ಅಂದ್ರೆ–
ಮೂಗ್ ಮೂರ್ ಚೂರಾಗ್ ಮುರಸ್ಕೊಂತೀನಿ
ದೇವರ್ ಮಾತ್ಗ್ ಅಡ್ಬಂದ್ರೆ !
‘ ಯೆಂಡ ಬುಟ್ಟಿ ಯೆಡ್ತೀನ್ ಬುಟ್‌ಬುಡ್ ! ’
ಅಂತ್ ಔನ್ ಏನಾರ್ ಅಂದ್ರೆ
ಕಳದೋಯ್ತು ಅಂತ ಕುಣದಾಡ್ತೀನಿ
ದೊಡ್ದ್ ಒಂದ್ ಕಾಟ ! ತೊಂದ್ರೆ !
‘ ಕನ್ನಡ್ ಪದಗೋಳ್ ಆಡೋದ್ನೆಲ್ಲ !
ನಿಲ್ಲೀಸ್ ಬುಡಬೇಕ್ ರತ್ನ ! ’
ಅಂತ್ ಔನ್ ಅಂದ್ರೆ–ದೇವ್ರ್ ಆದ್ರ್ ಏನು !
ಮಾಡ್ತೀನ್ ಔನ್ಗ್ ಖತ್ನ !
ಅಗ್ನಿಮಾಡೋ ಐಗೋಳ್ ಎಲ್ಲಾ
ದೇವ್ರೆ ಆಗ್ಲಿ–ಎಲ್ಲ !
ಕನ್ನಡ್ ಸುದ್ದೀಗ್ ಏನ್ರ ಬಂದ್ರೆ
ಮಾನಾ ವುಳಸಾಕಿಲ್ಲ !
ನರಕಕ್ಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ–
ಮೂಗ್ನಲ್ ಕನ್ನಡ್ ಪದವಾಡ್ತೀನಿ !
ನನ್ನ ಮನಸನ್ ನೀ ಕಾಣೆ !
ಯೆಂಡ ಓಗ್ಲಿ ! ಯೆಡ್ತಿ ಓಗ್ಲಿ !
ಎಲ್ಲಾ ಕೊಚ್ಕೊಂಡ್ ಓಗ್ಲಿ !
ಪರ್ಪಂಚ್ ಇರೋತನಕ ಮುಂದೆ
ಕನ್ನಡ್ ಪದ್ಗೋಳ್ ನುಗ್ಲಿ !

— ಜಿ. ಪಿ. ರಾಜರತ್ನಂ

# ೬೨. ಭರತಭೂಮಿ

ಎನಿತು ಪುಣ್ಯವನು ಮಾಡಿದೆನೊ ನಾನು !
ಜನಿಸಿದೆನು ನಾನಿಲ್ಲಿ ಭರತಭೂಮಿಯೊಳು ! ||ಪ||

ಅಲೆವ ಹೆದ್ದೆರೆಗಳಿಂದೆಸೆಯುತುದ್ಘೋಷಿಸುವ
ಜಲಧಿ ಮೂರೆಡೆಗಳಲಿ ಬಳಸಿ ನಿಂದು
ನಲಿನಲಿದು ನನ್ನ ನಾಡಿನ ಕೀರ್ತಿಗೀತೆಯನು
ಚೆಲುವಾಗೆ ಹಗಲಿರುಳು ಹಾಡುತಿಹುದು ! ||೧||

ಹಿಮಶೈಲವೆನ್ನ ನಾಡಿನ ಪುಣ್ಯಚಾರಿತ್ರ್ಯ–
ರಮಲಕೀರ್ತಿಯ ಧವಲಕಾಂತಿಯನು ತಳೆದು
ಅಮಿತರತ್ನಪ್ರಭವವಾಗಿ ಕಂಗೊಳಿಸುವುದು
ಕಮಲಜನ್ಮನ ಸೃಷ್ಟಿ ಕೌಶಲದ ಬೀಡು ! ||೨||

ಹರಿಯುತಿರುವುವು ಸುಧಾಸುಂದರೋದಕದ ನಿ–
ರ್ಝರಣಿಗಳು ನದನದಿಗಳೆಲ್ಲೆಲ್ಲಿಯೂ
ತೆರತೆರದ ಬೆಳೆಗಳಿಂದೆತ್ತಲೂ ಹಸುರೇರಿ
ಧರೆಯೆನ್ನ ನಾಡಿನೊಳು ರಾಜಿಸುವುದು ! ||೩||

ಎಲ್ಲಿರುವುದೀಬಗೆಯ ಸೊಂಪಿನಿಂಪಿನ ನಾಡು ?
ಬಲ್ಲವರ ತಾಯ್ನಾಡು ನನ್ನ ನಾಡು !
ಎಲ್ಲ ಸಂಪದಕೆನ್ನ ತಾಯ್ನಾಡು ನೆಲೆವೀಡು, !
ಬಲ್ಲಿದರ ನಾಡು ಪಾವನರ ನಾಡು ! ||೪||

ಭರತಭೂಮಿಯೆ ಇರಲಿ ತಾಯ್ನಾಡು ! ನನ್ನ ತನು
ಭರತಭೂಮಿಯ ಸೇವೆಯಲಿ ಸವೆಯುತಿರಲಿ !
ಭರತಭೂಮಿಯ ದಿವ್ಯನಾಮಸುಧೆ ನಾಲಗೆಯ-
ಲಿರಲಿ, ದೇವರ ದೇವ, ಜನ್ಮಜನ್ಮದಲಿ ! ||೫||

—ಸಾಲಿ ರಾಮಚಂದ್ರರಾಯರು

## ೬೩. ನನ್ನ ನಲ್ಲ

ನಿಲ್ಲು ನಿಲ್ಲಲೆ ನವಿಲೆ ನಿನ್ನ ಕಣ್ಣುಗಳೇಸು ।
ಕಣ್ಣ ಬಣ್ಣಗಳೇಸು ಎಣಿಸಲಾರೆ ।
ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ
ತಾಳಲಾರದು ಜೀವ ಹೇಳಬಾರೇ ॥೧॥

ಪಿಳುಕಿಸಿದ ಸಿರಿಗಣ್ಣು ಸುತ್ತು ಚಿನ್ನದ ರೇಖೆ
ಬೆಳ್ಳಿ ಮಿರುಗಿನ ಮೈಯ ಕಾಂತಿ ನಿನಗೆ ।
ತಿಳಿಗಂಗೆ ನಿಮ್ಮವ್ವ ಮೀನ ಮೂರುತಿ ತಿಳಿಸೊ
ನನ್ನೊಡೆಯನಡಗಿರುವನಾವ ಕಡೆಗೆ ॥೨॥

ಸಣ್ಣದನಿಯುವಳಾರೆ ಸುಣ್ಣದನಿಯವಳಾರೆ
ಹೆಣ್ಣುದನಿಗೈವ ಕೋಗಿಲೆಯೆ ಬಾರೇ ।
ಕಣ್ಣು ತಪ್ಪಿಸಿದವನ ಕುರುಹು ಹೇಳೇ ತಾಯಿ
ಬನದಮ್ಮ ನೀನಾರೆ ಕರುಣ ತೋರೇ ॥೩॥

ಬಹುರಸದ ಮೊಲೆಯುಣಿಸಿ ಜೀವ ತಣಿಸುವ ತಾಯಿ
ಸರ್ವರಾಧಾರ ಭೂದೇವಿ ತಾಯೀ ।
ಬಹಳ ಬೇಡುವಳಲ್ಲ ನನ್ನ ರಾಯನ ಸೊಲ್ಲ
ನೀರಾರೆ ಹೇಳಿಕೊಡಬಾರೆ ತಾಯೀ ॥೪॥

ತೋರಲಾರದ ಗಾಳಿ ತಟ್ಟಿ ತಿಳಿಸುವಿಯೇನು
ಯಾವ ನಾಡಿನ ಸೀಮೆ ತುಳಿದು ಬಂದೆ ?
ಮೀರಿತೆನ್ನಯ ತಾಪ ಆರಿಸೆನ್ನಯ ತಂದೆ
ನನ್ನ ರಾಯನ ಸುದ್ದಿ ಸಾರು ಇಂದೇ ॥೫॥

ನಿದ್ರಿಸುವ ಕತ್ತಲೆಯೆ, ಕನಸಿಡುವ ತಿಳಿ ಬೆಳಕೆ
ಜಾಗೃತದ ಕಿಚ್ಚೆ, ನೀನಾರೆ ಹೇಳು ।

ನಿದ್ರೆಬಾರದೆ ನಿಂತು ಸೋತು ಸಣ್ಣಾಗಿಹೆನು
ರಾಜ ರಾಜನ ಠಾವ ತೋರಿಸೇಳು ॥೬॥

ತರುವೆ ನೀ ಹೇಳೆನಗೆ ಮರವೆ ನೀ ಹೇಳೆನಗೆ
ಕಲ್ಲೆ ಕೊರಡೇ ನೆಲೆಯು ಹೇಳಿರೆನಗೆ ।
ಮೊರೆವೆ "ಕಾಮಾರ್ತಾ ಹಿ ಪ್ರಕೃತಿ ಕೃಪಣಾಶ್ಚೇತ-
ನಾ ಚೇತನೇಷು" ವೆಂಬಂತೆ ನಿಮಗೆ ॥೭॥

ನನ್ನ ಕಣ್ಣೀರಿನಲಿ ಕಲ್ಲು ಕರಗುತಲಿಹುದು
ನನ್ನೊಡನೆ ದಿಕ್ಕು ದನಿಗುಡುತಲಿಹುದು ।
ನನ್ನ ನಿಟ್ಟುಸಿರಿನಲಿ ಬನವು ಬಾಡುತಲಿಹುದು
ಕರುಳೆಂಬ ಕರುಳೇಕೆ ಕರಗದಿಹುದು ॥೮॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥೯॥

— ಮಧುರ ಚೆನ್ನ



## ೭೪. ಶುಭಸಂದೇಶ

ಇಂದು ನಾನೊಂದು ಸಂದೇಶವನು ತಂದಿಹೆನು
ಕೇಳುವಿರ ಅಣ್ಣಂದಿರಾ !
ಸಂದೇಶವಿದು ಜಂದುದಲ್ಲೆನ್ನ ಬುದ್ಧಿಯಿಂ
ಅಂತರಾತ್ಮನು ಹೃದಯದಂತರಾಳದೊಳಿದ್ದು
ವೈಣಿಕನು ತಂತ್ರಿಯಿಂ ಗಾನವನು ನುಡಿಸುವಂ
ದದಿಯೆನ್ನ ವಾಣಿಯಿಂದಿದನು ನುಡಿಸಿದನೆಂದು
ನಂಬಿನೀಂ—

ರಾಷ್ಟ್ರ ರಾಷ್ಟ್ರಗಳೆದ್ದು ಮಾರ್ಮಲೆತು
ಹೂಂಕರಿಸುತಿರುವಾಗ
ಮತಮತಾಂತರಗಳೊಳಗೊಳಗೆ ಮಾಂ
ಕರಿಸಿ ಮಸೆದಿರುವಾಗ
ಬಡವಬಲ್ಲಿದರೆಲ್ಲ ಮೇಲ್ವಾಯ್ದು
ರಕ್ತವನೆ ಸುರಿವಾಗ
ನಾಂ ಮೇಲು ನೀಂ ಕೀಳು ಎಂದೆಂದು
ಜರೆಜರೆದು ಕರೆವಾಗ
ಭಾಷೆ ಭಾಷೆಗಳೆರಡು ಒಡೆದೊಡೆದು
ಹೋರಾಡುತಿರುವಾಗ
ಭೂಮಿ ಆಕಾಶದೊಂದಂತರವು
ಜನಮನದಿ ಇರುವಾಗ
ಮಾನವನ ಪಶುವೃತ್ತಿ ಮತ್ತೇರಿ
ತತ್ತರಿದು ತರಿವಾಗ
ಮುಂದೇನು ಗತಿಯೆಂದು ನಾಸಿಂತು
ಚಿಂತಿಸುತಲಿರುವಾಗ
ದಿವ್ಯವಾಣಿಯದು ಮೊಳಗಿತು, ಅಮೃತ
ಧಾರೆಯನು ಕರೆದಾಗ
"ಮಾನವನೆ! ಮರೆಯದಿರು ನೀನ್ ದೈವ
ಸಂಕಲ್ಪವೆಂಬುದನು
ಭೇದ ಭಾವವು ಹುಟ್ಟಿತೆಲ್ಲಿಂದೆ?
ಅಲ್ಲಿಂದೆ ಹುಟ್ಟುವುದು
ಎದೆ ಎದೆಯನೆರಕದಿಂ ಬಿಗಿದು ಬೆಸೆವಾ
ಪ್ರೇಮಭಾವವದು
ಇದನರಿತು ಚಿತ್ತಶುದ್ಧಿಯಲಿ ನೀನ್
ವರ್ತಿಸೈ ನೆರೆನಂಬಿ
ಎಂದಿನಂದದಿಯೆಲ್ಲರೊಂದಾಗಿ
ಬಾಳಿರಾನಂದದಲಿ" -

—ಡಿ. ಕೆ. ಭೀಮಸೇನರಾವ್

# ೬೫. ಮಾತೃದೇವಿ

ಕಿರಿಯತನದಲಿ ಚಿನ್ನ
ತಾಯ್ತನದ ಹೆಂಗರುಳು
ನಿಲುಕದಾಯಿತು ಅಬ್ಬೆ,
ಬಾಲಮತಿಗೆ ॥೧॥

ಯೌವನದ ಉನ್ಮಾದ
ಮನವ ತತ್ತಳದುಳಿಯೆ,
ಕಾಮಮೃಗಜಲಕೆಳಸಿ
ಬಾಯಬಿಟ್ಟೆ ॥೨॥

ಮುಪ್ಪು ಬರೆ ಮತಿ ಮಸುಳಿ
ಮೈಯುಳವು ಕಳೆದುಳಿಯೆ,
ನಾನು ನನ್ನೊಳೆ ಕುಳಿತೆ
ವಿಕಲನಾಗಿ ॥೩॥

ನಿನ್ನಿಂದ ಮೈವೆತ್ತು
ನಿನ್ನ ಮಮತೆಯ ಹೊತ್ತು
ಹಸನವಾಯಿತು, ಹಸುಳೆ
ಬಾಳು, ತಾಯೇ! ॥೪॥

ಗಂಡು ಗರ್ವದಿ ತೊದಲಿ,
ಹೆಂಡತಿಯು ನೀನೆಂದು
ತೊಂಡ ನುಡಿದರೆ ಕೇಳಿ
ಸಹನೆದೋರು ॥೫॥

ಮುಪ್ಪಿನರೆಮರವಿನಲಿ
ಉಪಕೃತಿಯ ಸ್ಮರಿಸದಿರೆ,
ನೇಹಗಂಬನಿಗರೆದು,
ಕರುಣೆದೋರು! ॥೬॥

ಕ್ರೋಧ, ರೋಷ, ದ್ವೇಷ
ಕೆರಳಿರಲು ದುಗುಡವನು,
ಸೌಜನ್ಯ ಸೌಹಾರ್ದ,
ಮೆರೆಯ ಬಂದೆ ||೭||

ಕಾಠಿನ್ಯ ಕರ್ಕಶತೆ
ಕ್ರೌರ್ಯ ದರ್ಪೋದ್ವೇಗ
ಮೃದುಗೊಳಿಸಿ ಸ್ನೇಹಲತೆ
ಬೆಳಸ ಬಂದೆ ||೮||

ನಿರ್ಗುಣ ನಿರಂಜನ
ನಿರಾಕಾರ ಪುರುಷನಿಗೆ
ಸಾಕಾರ ಸಾಗುಣ್ಯ-
ಈಯ ಬಂದೆ ||೯||

ಶೂನ್ಯ ತಾಳಿತು ರೂಪು,
ರಸ, ಗಂಧ, ನಾಮಗಳ
ನಿನ್ನ ಮಾಯಾಬಲದಿ
ಪ್ರಕೃತಿದೇವಿ ! ||೧೦||

ಧಾತ್ರಿ ಗಾಯತ್ರಿ ಸಾ-
ವಿತ್ರಿ ಸನ್ಮಿತ್ರೆ ಜನ-
ಯಿತ್ರಿಯಾಕೃತಿ ತಳೆದೆ
ಮಾತೃದೇವಿ ! ! ||೧೧||

— "ಮಾನ್ವಿ"



# ೬೬. ಕಾಲಭೈರವ

ಏಕೆ ಕುಣಿವೆ ತೂಕ ತಪ್ಪಿ ಸಾಕು ಕಾಲಭೈರವ
ನಾಕ ಹೋಗಿ ನರಕವಾಯ್ತು ಸಾಕು ಮಾಡು ಸ್ವೈರವ
ಯಾವ ಪಾಪಗೈದುದಿಳೆಯು? ಸಾಕು ಮಾಡು ವೈರವ
ಅಡಿಗೆ ಸಿಕ್ಕಿ ಮುದುಡಿಹೋಯ್ತು ಮನುಜಲೋಕಕೈರವ! ||ಏಕೆ....

ಎಲ್ಲಿ ಹೆಜ್ಜೆ ತಪ್ಪುತಿಹೆಯೊ, ಎಲ್ಲಿ ಗೆಜ್ಜೆ ಹರಿದುದೊ
ಎಲ್ಲಿ ಒಜ್ಜೆ ಅಸಮವಾಯ್ತೊ, ಎಲ್ಲಿ ಪಜ್ಜೆ ಸರಿದುದೊ
ಏನು ತಾಳ ತಪ್ಪುತಿಹುದೊ, ಕುಣಿವ ಬಿಜ್ಜೆ ಮರೆದುದೊ
ಕುಣಿವುದನ್ನೆ ನಿಲ್ಲಿಸಿಹೆಯೊ, ಬೇರೆ ಕಜ್ಜ ಕರೆದುದೊ? ||ಏಕೆ....

ಪಕ್ಕ ವಾದ್ಯ ತಪ್ಪುತಿಹುದೊ, ನೀನೆ ತಪ್ಪುತಿರುವೆಯೊ?
ತಾಳ ಕಟೆವ ಕೈಯ ತಪ್ಪ ನೀನು ಒಪ್ಪುತಿರುವೆಯೊ?
ಏನು ನಿನ್ನ ಹರೆಯು ಹಿಂಗಿ ಮುಪ್ಪನಪ್ಪುತಿರುವೆಯೊ?
ನೀನು ತಪ್ಪಿ ನಾಟ್ಯಕಲೆಯ ಮುಖಕೆ ಕಪ್ಪ ತರುವೆಯೊ! ||ಏಕೆ....

ಎಲ್ಲೊ ಏನೊ ದೋಷ ಉಳಿದು ಗಾಸಿಯಾಯ್ತು ಜಗವಿದು
ಯಾಕೊ ಏನೊ ದ್ವೇಷ ಬೆಳೆದು ನಾಶವಾಯ್ತು ಜಗವಿದು
ರೋಷ ಹೆಚ್ಚಿ ತೋಷವಳಿದು ಮೋಸಹೋಯ್ತು ಜಗವಿದು
ನಿನ್ನ ಕುಣಿತವಿದಕೆ ಹೊಣೆಯು! ಕುಣಿತದಾವ ಬಗೆಯಿದು? ||ಏಕೆ....

ವಂಶ ಬಂದು ವಂಶ ಹೋಯ್ತು, ಒಂದೆ ಮೂಲ ವೃತ್ತಿಯು
ಮತ್ತೆ ಮತ್ತೆ ಉದಿಸಿ ಅಳಿದುದಾಯ್ತು ಆಧಿಪತ್ಯವು
ನಾಗರಿಕತೆ ಬೆಳೆದೊಡೇನು? ಒಂದೆ ನರಪ್ರವೃತ್ತಿಯು
ಏನು ಗಾನ? ಏಕತಾನ! ಏನು ನಿನ್ನ ನೃತ್ಯವು! ||ಏಕೆ....

ಇದುವರೆಗಿನ ಏಕತಾನ ಸಾಕು, ಹೊಸತು ಗಾಯನ
ಹೊಮ್ಮಿ ಬರಲಿ! ಇನ್ನು ನೀನು ಹೊಸತು ಹೊಸತು ನರ್ತನ
ಕಲಿಯೊ ಕಾಲಭೈರವನೆ! ಮರಳಿ ಜಗವ ಜೀವನ
ಹೂವಿನಂತೆ ಅರಳಿ ತರಲಿ ಆನಂದ ರಸಾಯನ! ||ಏಕೆ....

ನೀನು ಹೆಜ್ಜೆ ಚೆಲ್ಲೆ ಹುಲ್ಲು ಹೂವು ಹಣ್ಣು ಬೆಳೆಯಲಿ
ನಿನ್ನ ಪಾದಸ್ಪರ್ಶದಿಂದ ಭೂಮಿ ಪುಳಕ ತಳೆಯಲಿ
ಸುತ್ತು ಸಸ್ಯವೃದ್ಧಿಯಾಗಿ ಕೊರತೆ ಹಸಿವೆಯಳಿಯಲಿ
ಹೊಟ್ಟೆಯ ಹೋರಾಟವಡಗಿ ಸತ್ಯ ಪ್ರೀತಿ ಉಳಿಯಲಿ ||ಏಕೆ....

ಯುಗಯುಗಗಳ ಹಗೆಯು ಹೋಗಿ ಸೊಗದಿ ಬರಲಿ ಸಖ್ಯವು
ದೇಶದೇಶದಲ್ಲಿ ದುಃಖ ಹಿಂಗಿ ಬರಲಿ ಸೌಖ್ಯವು
ದ್ವೇಷ ಮೋಸವಳಿದು ಬರಲಿ ಮನುಜ ಕುಲದ ಐಕ್ಯವು
ಸತ್ಯ ಪ್ರೀತಿ ಶಾಂತಿಯಕ್ಕೆ ನಮ್ಮ ಭರತವಾಕ್ಯವು ||ಏಕೆ....

— ಕಾವ್ಯಾನಂದ



# ಪರಿಶಿಷ್ಟ

## — ಟಿಪ್ಪಣಿಗಳು —

ಸಂಖ್ಯೆಗಳು ಪುಸ್ತಕದಲ್ಲಿಯ ಪದ್ಯಸಂಖ್ಯೆಗಳನ್ನು ಸೂಚಿಸುತ್ತವೆ.

**೧. ಕವಿ ವಿಚಾರ :–** ನೃಪತುಂಗ. ಕಾಲ ಕ್ರಿ. ಶ. ಸುಮಾರು ೮೧೪–೮೭೭. ರಾಷ್ಟ್ರಕೂಟಚಕ್ರವರ್ತಿ. ಸ್ಥಳ– ಮಾನ್ಯಖೇಟ, ಈಗಿನ ಮಳಖೇಡ. ಕೃತಿ– ಕವಿರಾಜಮಾರ್ಗ. ಇದುವರೆಗೆ ಉಪಲಬ್ಧವಾದ ಗ್ರಂಥಗಳಲ್ಲಿ ಈ ಗ್ರಂಥವೇ ಮೊದಲನೆಯದು.

**ಸಂದರ್ಭ :–** ಈ ಪದ್ಯಗಳನ್ನು ಕವಿರಾಜಮಾರ್ಗದ ಮೊದಲನೆಯ ಪರಿಚ್ಛೇದದಿಂದ ತೆಗೆದುಕೊಂಡಿದೆ.

**೨. ಕವಿ ವಿಚಾರ :–** ಪಂಪ. ಕಾಲ ಕ್ರಿ. ಶ. ಸುಮಾರು ೯೪೧. ಜೈನ. ಕವಿ ಚಾಳುಕ್ಯ ವಂಶದ ಅರಿಕೇಸರಿಯ ಆಸ್ಥಾನದಲ್ಲಿದ್ದನು. ಅರಿಕೇಸರಿ ಬೋಧನ (ನಿಜಾಮಾಬಾದ್ ಜಿಲ್ಲೆಯಲ್ಲಿಯ ಬೋಧನ್) ಎಂಬಲ್ಲಿ ಆಳುತ್ತಿದ್ದನು. ಈ ಕವಿಗೆ ಕನ್ನಡ ಸಾಹಿತ್ಯದಲ್ಲಿ ಆದಿಕವಿಯೆಂಬ ಖ್ಯಾತಿಯಿದೆ. ಹಿತಮಿತವಾಗಿ ಹೇಳುವುದು ಇವನ ಮುಖ್ಯ ಗುಣ. ತರುವಾಯ ಬಂದ ಕವಿಗಳೆಲ್ಲರೂ ಇವನನ್ನು ಹೊಗಳಿದ್ದಾರೆ. ಕೃತಿಗಳು– ಆದಿಪುರಾಣ, ವಿಕ್ರಮಾರ್ಜುನ ವಿಜಯ. ಇದಕ್ಕೆ ಪಂಪಭಾರತವೆಂದು ಹೆಸರಿದೆ.

**ಸಂದರ್ಭ :–** ಈ ಭಾಗವನ್ನು ಭಾರತದಿಂದ ತೆಗೆದುಕೊಂಡಿದೆ. ಅರ್ಜುನನು ದಿಗ್ವಿಜಯಕ್ಕೆ ಹೊರಟಾಗ ಬನವಾಸಿಗೆ ಬರುತ್ತಾನೆ. ಆ ದೇಶವನ್ನು ಮೆಚ್ಚಿ ಕೊಂಡಾಡುತ್ತಾನೆ. ಬನವಾಸಿ ಪಂಪನ ಜನ್ಮಸ್ಥಳವಾಗಿರಬಹುದೆಂದು ಕೆಲವರು ಹೇಳುತ್ತಾರೆ.

**೪. ಸಂದರ್ಭ :–** ಮಗಳನ್ನು ಅತ್ತೆಯ ಮನೆಗೆ ಕಳಿಸುವಾಗಿನ ಸೊಗಸಾದ ವರ್ಣನೆಯಿದು.

**೬. ಕವಿ ವಿಚಾರ :–** ಪೊನ್ನ. ಕಾಲ, ಕ್ರಿ. ಶ. ಸುಮಾರು ೯೫೦. ಜೈನ. ಸ್ಥಳ, ಮಳಖೇಡ. ರಾಷ್ಟ್ರಕೂಟ ಚಕ್ರವರ್ತಿ ಮೂರನೆಯ ಕೃಷ್ಣನ ಆಸ್ಥಾನಕವಿಯಾಗಿದ್ದನು. ಈ ಚಕ್ರವರ್ತಿ, ಪೊನ್ನನಿಗೆ "ಉಭಯಕವಿಚಕ್ರವರ್ತಿ" ಎಂಬ ಬಿರುದನ್ನು ಕೊಟ್ಟನು. ಕನ್ನಡ ಸಾಹಿತ್ಯದಲ್ಲಿ ಇವನೇ ಮೊದಲನೆಯ ಕವಿಚಕ್ರವರ್ತಿ. ಇವನು ಪ್ರಸಿದ್ಧನಾದ ಕವಿ. ಕೃತಿಗಳು– ಶಾಂತಿ ಪುರಾಣ, ಜಿನಾಕ್ಷರ ಮಾಲೆ, ಭುವನೈಕ ರಾಮಾಭ್ಯುದಯ, ಗತಪ್ರತ್ಯಾಗತ. ಇವುಗಳಲ್ಲಿ ಮೊದಲಿನವೆರಡು ಮಾತ್ರ ಸಿಕ್ಕಿವೆ.

**೭. ಕವಿ ವಿಚಾರ :–** ರನ್ನ. ಕಾಲ, ಕ್ರಿ. ಶ. ಸುಮಾರು ೯೯೩. ಜೈನ. ಕಲ್ಯಾಣ ಚಾಲುಕ್ಯಚಕ್ರವರ್ತಿ ಆಹವಮಲ್ಲನ ಆಸ್ಥಾನಕವಿಯಾಗಿದ್ದನು. ಈ ಚಕ್ರ

ವರ್ತಿಯೇ ಈತನಿಗೆ ಕವಿಚಕ್ರವರ್ತಿಯೆಂಬ ಬಿರುದು ಕೊಟ್ಟನು. ಕನ್ನಡ ಸಾಹಿತ್ಯದಲ್ಲಿ ಈತನು ಎರಡನೆಯ ಚಕ್ರವರ್ತಿ. ಪಂಪನ ತರುವಾಯ ಕನ್ನಡ ಸಾಹಿತ್ಯದಲ್ಲಿ ಇವನೇ ಪ್ರಸಿದ್ಧನಾಗಿದ್ದಾನೆ. ಕೃತಿಗಳು - ಅಜಿತ ಪುರಾಣ, ಸಾಹಸ ಭೀಮವಿಜಯ ಇದಕ್ಕೆ ಗದಾಯುದ್ಧವೆಂದೂ ಹೆಸರುಂಟು. ಈ ಎರಡು ಕೃತಿಗಳು ಬಹಳ ಪ್ರಸಿದ್ಧವಾಗಿವೆ.

**ಸಂದರ್ಭ:**– ದುರ್ಯೋಧನನು ಸಂಜಯನೊಡನೆ ಯುದ್ಧಭೂಮಿಯಲ್ಲಿ ಮಡಿದು ಬಿದ್ದ ವೀರರನ್ನು ನೋಡಿ ಮರುಗುತ್ತ ಹೊರಟಿದ್ದಾನೆ. ಆಗ ಕರ್ಣನ ಕಳೇಬರವನ್ನು ನೋಡುತ್ತಾನೆ. ದುಃಖವು ಒತ್ತಿಕೊಂಡು ಬರುತ್ತದೆ. ಈ ಪದ್ಯಗಳಲ್ಲಿ ರನ್ನನು ಮನಸ್ಸು ಕರಗುವಂತೆ ದುರ್ಯೋಧನನ ಸ್ನೇಹಹೃದಯವನ್ನು ತೆರೆದಿದ್ದಾನೆ.

**೧೦. ಕವಿ ವಿಚಾರ:**– ನಾಗವರ್ಮ. ಕಾಲ ಕ್ರಿ. ಶ. ಸುಮಾರು ೧೦೭೦? ಕೃತಿ– ಕನ್ನಡ ಕಾದಂಬರಿ. ಇದು ಸಂಸ್ಕೃತದಲ್ಲಿ ಬಾಣಭಟ್ಟನು ಬರೆದಿರುವ ಕಾದಂಬರಿಯ ಕನ್ನಡ ಅನುವಾದ. ಬಾಣಕಾದಂಬರಿ ಗದ್ಯದಲ್ಲಿದೆ. ನಾಗವರ್ಮನು ಚಂಪುವಿನಲ್ಲಿ ಬರೆದಿದ್ದಾನೆ. ಚಂಪುವೆಂದರೆ ಗದ್ಯ ಪದ್ಯ ಮಿಶ್ರ ಗ್ರಂಥ. ಈ ಕವಿ ಕಾದಂಬರಿಯನ್ನು ಸ್ವಾರಸ್ಯಪೂರ್ಣವಾದ ಶೈಲಿಯಲ್ಲಿ ಬರೆದಿದ್ದಾನೆ.

**ಸಂದರ್ಭ:**– ಚಂದ್ರಾಪೀಡನೆಂಬ ರಾಜಕುಮಾರನು ಕಿನ್ನರ ದಂಪತಿಗಳನ್ನು ಬೆನ್ನಟ್ಟಿ ಕೊಂಡು ಹೊರಟಿರುತ್ತಾನೆ. ಆಗ ಅವನಿಗೆ ಸಂಗೀತಧ್ವನಿ ಕೇಳಿಬರುತ್ತದೆ. ಆ ಧ್ವನಿಯ ಜಾಡನ್ನು ಹಿಡಿದು ಹೋಗುತ್ತಾನೆ. ಅಲ್ಲಿ ಗಂಧರ್ವಕನ್ನಿಕೆಯೊಬ್ಬಳನ್ನು ಕಾಣುತ್ತಾನೆ. ಅವಳ ಹೆಸರು ಮಹಾಶ್ವೇತೆ. ಅವಳು ತನ್ನ ವೃತ್ತಾಂತವನ್ನು ಚಂದ್ರಾಪೀಡನಿಗೆ ನಿರೂಪಿಸುತ್ತಾಳೆ.

**೧೧. ಸಂದರ್ಭ:** ಮಹಾಶ್ವೇತೆಗೆ ಕಾದಂಬರಿಯೆಂಬ ಒಬ್ಬ ಸಖಿ. ಮಹಾಶ್ವೇತೆಯು ಮದುವೆಯಾಗುವ ವರೆಗೆ ತಾನೂ ಮದುವೆಯಾಗುವುದಿಲ್ಲವೆಂದು ಹಟತೊಟ್ಟಿರುತ್ತಾಳೆ. ಕಾದಂಬರಿಯ ದೂತನೊಬ್ಬನು ಮಹಾಶ್ವೇತೆಯನ್ನು ಕರೆಯುವುದಕ್ಕೆ ಬರುತ್ತಾನೆ ಆಗ ಚಂದ್ರಾಪೀಡನೂ ಅಲ್ಲಿಯೇ ಇರುತ್ತಾನೆ. ಮಹಾಶ್ವೇತೆ ಕಾದಂಬರಿಯನ್ನು ನೋಡುವುದಕ್ಕೆ ಚಂದ್ರಾಪೀಡನನ್ನು ಸಂಗಡ ಬರಬೇಕೆಂದು ಕೇಳುತ್ತಾಳೆ. ಮುಂದಿನ ಕಥೆ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೧೨. ಕವಿ ವಿಚಾರ:**– ನಾಗಚಂದ್ರ. ಕಾಲ ಕ್ರಿ. ಶ. ಸುಮಾರು ೧೧೦೦ ಜೈನ. ಇವನು ಬರೆದ ಒಂದು ಶಾಸನ ವಿಜಾಪುರದಲ್ಲಿದೆ. ಕೃತಿ– ರಾಮಚಂದ್ರ ಚರಿ ಪುರಾಣ, ಮಲ್ಲಿನಾಥ ಪುರಾಣ. ಇವನನ್ನು ಅಭಿನವಪಂಪನೆಂದೂ ಹೇಳುವುದುಂಟು ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠ ವರ್ಗದ ಕವಿ.

**ಸಂದರ್ಭ:**– ರಾವಣನು ದಿಗ್ವಿಜಯಾರ್ಥವಾಗಿ ಹೊರಟಾಗ ನಳಕೂಬರನ ಪಟ್ಟಣವನ್ನು ಮುತ್ತುತ್ತಾನೆ. ಅದು ವಶವಾಗುವುದಿಲ್ಲ. ಅವನು ಯೋಚನೆಯಲ್ಲಿರುವಾಗ ನಳಕೂಬರನ ಹೆಂಡತಿ ರಾವಣನನ್ನು ಮೋಹಿಸುತ್ತಾಳೆ. ಅವಳಿಂದ ಆ ಪುರವನ್ನು ಸ್ವಾಧೀ

ಾಡಿಕೊಳ್ಳುತ್ತಾನೆ. ಇಲ್ಲಿ ಆಯ್ದುಕೊಂಡ ಕಾವ್ಯಭಾಗವಲ್ಲಿ ರಾವಣನ ಶೀಲವು ಮನೋಹ ವಾಗಿ ಚಿತ್ರಿತವಾಗಿದೆ.

**೧೪. ಕವಿ ವಿಚಾರ :**– ಹರಿಹರದೇವ. ಕಾಲ ಕ್ರಿ. ಶ. ಸುಮಾರು ೧೩ನೆಯ ತಮಾನದ ಉತ್ತರಾರ್ಧ. ಕೃತಿ– ಗಿರಿಜಾಕಲ್ಯಾಣ, ಪಂಪಾಶತಕ, ರಗಳೆಗಳು. ಪ್ರಸಿ ್ಧರಾದ ವೀರಶೈವ ಕವಿಗಳು ಇವನನ್ನು ಕಾವ್ಯಾರಂಭದಲ್ಲಿ ಸ್ತುತಿಸಿದ್ದಾರೆ. ಹಂಪೆಯಲ್ಲಿ ವಾಸವಾಗಿದ್ದನು. ಇವನ ರಗಳೆಗಳು ಕನ್ನಡ ಸಾಹಿತ್ಯದಲ್ಲಿ ಬಹಳ ಪ್ರಸಿದ್ಧವಾಗಿವೆ.

**ಸಂದರ್ಭ :**– ದೇವತೆಗಳಿಗೂ ತಾರಕಾಸುರನಿಗೂ ಯುದ್ಧ ನಡೆದಿರುತ್ತದೆ. ಶಿವ ಾರ್ವತಿಯರ ಮಗ ಷಣ್ಮುಖನು ತಾರಕಾಸುರನನ್ನು ಕೊಲ್ಲಬೇಕಾಗಿ ವರವಿರುತ್ತದೆ. ಈಶ್ವರನು ಪಸ್ಸುಮಾಡುತ್ತ ಕುಳಿತಿರುತ್ತಾನೆ. ಪಾರ್ವತಿ ಶಿವನನ್ನು ಒಲಿಸಿಕೊಳ್ಳಲು ಸೇವೆ ಮಾಡು ್ತಿರುತ್ತಾಳೆ. ಇವರಿಬ್ಬರ ಮದುವೆಯಾಗುವಂತೆ ಈಶ್ವರನ ತಪಸ್ಸನ್ನು ಕೆಡಿಸಲು ದೇವತೆ ಳು ಮನ್ಮಥನನ್ನು ಕಳಿಸಿಕೊಡುತ್ತಾರೆ. ಮನ್ಮಥನು ಈಶ್ವರನ ಮೇಲೆ ಪುಷ್ಪಬಾಣ ್ರಯೋಗ ಮಾಡಲು ಸಿದ್ಧನಾಗಿದ್ದಾನೆ. ಮುಂದಿನ ಕಥಾಭಾಗ ಈ ಪದ್ಯಗಳಲ್ಲಿ ವರ್ಣಿತ ಾಗಿದೆ.

**೧೫. ಸಂದರ್ಭ:** ಕಾಮದಹನವಾದ ಮೇಲೆ ಈಶ್ವರನು ಪಾರ್ವತಿಯನ್ನು ಕಣ್ಣೆತ್ತಿ ೋಡದೆ ಕೈಲಾಸಕ್ಕೆ ಹೊರಟುಹೋಗುತ್ತಾನೆ. ಆತನನ್ನು ಒಲಿಸಿಕೊಳ್ಳಲು ಪಾರ್ವತಿ ಉಗ್ರ ತಪಸ್ಸಿನಲ್ಲಿ ಇರುತ್ತಾಳೆ. ಈಶ್ವರನು ಆಕೆಯ ತಪಸ್ಸನ್ನು ಪರೀಕ್ಷಿಸಲು ವಟುವೇಷ ಂದ ಪಾರ್ವತಿಯಲ್ಲಿಗೆ ಬರುತ್ತಾನೆ.

**೧೬. ಸಂದರ್ಭ :** ಬಸವಣ್ಣನು ಕಪ್ಪಡಿ ಸಂಗಮೇಶ್ವರನಿಂದ ಆಜ್ಞೆ ಪಡೆದು ಜ್ಜಳನ ಆಸ್ಥಾನಕ್ಕೆ ಬರುತ್ತಾನೆ. ಆಗಿನ ಸನ್ನಿವೇಶ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೧೭. ಕವಿ ವಿಚಾರ :**– ರಾಘವಾಂಕ. ಕಾಲ ೧೩ನೆಯ ಶತಮಾನದ ಉತ್ತ ಾರ್ಧ. ಇವನು ಹರಿಹರದೇವನ ಸೋದರದ ಅಳಿಯ. ಈತನನ್ನು ವೀರಶೈವ ಕವಿಗಳು ಾವ್ಯಾರಂಭದಲ್ಲಿ ಸ್ತುತಿಸಿದ್ದಾರೆ. ಇವನ ಕೃತಿಗಳಲ್ಲಿ ಹರಿಶ್ಚಂದ್ರ ಕಾವ್ಯವು ಸುಪ್ರಸಿದ್ಧವಾ ದೆ. ಕನ್ನಡ ಸಾಹಿತ್ಯದಲ್ಲಿ ಷಟ್ಪದಿಗಳನ್ನು ಬಳಕೆಗೆ ತಂದ ಖ್ಯಾತಿ ಇವನಿಗಿದೆ. ಕನ್ನಡದ ್ರೇಷ್ಠವರ್ಗದ ಕವಿ.

**ಸಂದರ್ಭ :**– ಹರಿಶ್ಚಂದ್ರ ಬೇಟೆಗೆ ಹೋಗಿರುತ್ತಾನೆ. ವಿಶ್ವಾಮಿತ್ರನು ಈತನ ಸತ್ಯ ನ್ನು ಪರೀಕ್ಷಿಸಬೇಕೆಂದು ಒಂದು ಹಂದಿಯನ್ನು ಸೃಷ್ಟಿಸಿ ಹರಿಶ್ಚಂದ್ರನ ಕಣ್ಣಿಗೆ ಬೀಳುವಂತೆ ಾಡುತ್ತಾನೆ. ಹರಿಶ್ಚಂದ್ರನು ಆ ಹಂದಿಯನ್ನು ಬೆನ್ನಟ್ಟಿಕೊಂಡು ಹೋಗಿ ಒಂದು ಬಾಣ ಂದ ಹೊಡೆಯುತ್ತಾನೆ. ಅದು ಗಾಯಗೊಂಡು ವಿಶ್ವಾಮಿತ್ರನಲ್ಲಿಗೆ ಹೋಗುತ್ತದೆ. ಅದನ್ನು ೋಡಿ ವಿಶ್ವಾಮಿತ್ರನು ಕೆರಳುತ್ತಾನೆ. ಮುಂದಿನ ಕಥೆ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೧೮. ಸಂದರ್ಭ:**– ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ತಾನು ಕೊಟ್ಟ ವಚನದಂತೆ ಾಜ್ಯವನ್ನು ಒಪ್ಪಿಸಿದ ಭಾಗ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೧೯. ಸಂದರ್ಭ:**- ಚಂದ್ರಮತಿ ಹರಿಶ್ಚಂದ್ರನ ಹೆಂಡತಿ. ಹರಿಶ್ಚಂದ್ರನು ಕಾಶಿಯಲ್ಲಿ ಇವಳನ್ನು ಒಬ್ಬ ಬ್ರಾಹ್ಮಣನಿಗೆ ಮಾರಿರುತ್ತಾನೆ. ಚಂದ್ರಮತಿ ತನ್ನ ಮಗ ಲೋಹಿತಾಶ್ವನ ಸಂಗಡ ಬ್ರಾಹ್ಮಣನ ಸೇವೆ ಮಾಡುತ್ತ ಅವನ ಮನೆಯಲ್ಲಿ ಇರುತ್ತಾಳೆ. ಒಂದು ಸಲ ಲೋಹಿತಾಶ್ವನು ಸಮಿತ್‌ಪುಷ್ಪಗಳನ್ನು ತರುವುದಕ್ಕೆಂದು ಅಡವಿಗೆ ಹೋದಾಗ ಹಾವು ಕಚ್ಚಿ ಸಾಯುತ್ತಾನೆ. ಚಂದ್ರಮತಿ ಮಗನನ್ನು ನೋಡಿ ಪ್ರಲಾಪಿಸುತ್ತಾಳೆ.

**೨೦. ಕವಿ ವಿಚಾರ:**- ರುದ್ರಭಟ್ಟ. ಕಾಲ ೧೨ ನೆಯ ಶತಮಾನದ ಕೊನೆಯ ಭಾಗ. ಬ್ರಾಹ್ಮಣ. ಇವನ ಕೃತಿ- 'ಜಗನ್ನಾಥವಿಜಯ' ಸುಪ್ರಸಿದ್ಧವಾಗಿದೆ. ಇವನು ಉದ್ದಾಮ ಕವಿ.

'ಜಗನ್ನಾಥವಿಜಯ'ದಲ್ಲಿ ಶ್ರೀಕೃಷ್ಣನ ಚರಿತ್ರೆ ವರ್ಣಿತವಾಗಿದೆ. ಶ್ರೀಕೃಷ್ಣನ ಬಾಲ ಲೀಲೆಯನ್ನು ಈ ಪದ್ಯಗಳಲ್ಲಿ ಕವಿ ಮನೋಹರವಾಗಿ ವರ್ಣಿಸುತ್ತಾನೆ.

**೨೧. ಸಂದರ್ಭ:**- ಶ್ರೀಕೃಷ್ಣಬಲರಾಮರನ್ನು ಮಥುರಾ ಪಟ್ಟಣಕ್ಕೆ ಕರೆದು ಕೊಂಡು ಬರಲು ಕಂಸನು ಅಕ್ರೂರನನ್ನು ಕಳಿಸಿಕೊಟ್ಟಿರುತ್ತಾನೆ. ಗೋಕುಲಕ್ಕೆ ಬಂದು ಅಕ್ರೂರನು ಅವರನ್ನು ಕರೆದುಕೊಂಡು ಹೋಗಲು ಸಿದ್ಧನಾಗುತ್ತಾನೆ. ಗೋಪಿಯರು ಶ್ರೀಕೃಷ್ಣನ ಅಗಲಿಕೆಯನ್ನು ಸಹಿಸಿಕೊಳ್ಳಲಾರದೆ, ಪ್ರೇಮ ತುಂಬಿದ ಹೃದಯದಿಂದ ಅಳಲುತ್ತಾರೆ. ಆ ಸಂದರ್ಭವು ಇಲ್ಲಿ ಮನೋಹರವಾಗಿ ವರ್ಣಿತವಾಗಿದೆ.

**೨೨. ಕವಿ ವಿಚಾರ:** ಜನ್ನ. ಕಾಲ ಕ್ರಿ. ಶ. ಸುಮಾರು ೧೨೦೯. ಜೈನ. ದ್ವಾರ ಸಮುದ್ರವನ್ನು ಆಳುತ್ತಿದ್ದ ಹೊಯಿಸಳ ವಂಶದ ಚಕ್ರವರ್ತಿ ಎರಡನೆಯ ವೀರ ಬಲ್ಲಾಳನ ಆಸ್ಥಾನಕವಿ. ವೀರಬಲ್ಲಾಳನು ಇವನಿಗೆ ಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟನು. ಕನ್ನಡ ಸಾಹಿತ್ಯದಲ್ಲಿ ಈತನು ಮೂರನೆಯ ಕವಿಚಕ್ರವರ್ತಿ. ಯಶೋಧರ ಚರಿತ್ರೆ ಅನಂತ ನಾಥ ಪುರಾಣ. ಇವು ಇವನ ಪ್ರಸಿದ್ಧ ಕೃತಿಗಳು ಇವನ ತರುವಾಯದ ಕವಿಗಳು ಇವನನ್ನು ಸ್ತುತಿಸಿದ್ದಾರೆ. ಇವನು ಶ್ರೇಷ್ಠವರ್ಗದ ಕವಿ.

**ಸಂದರ್ಭ:**- ಯಶೋಧರನ ಪತ್ನಿ ಅಮೃತಮತಿ. ಮಧ್ಯರಾತ್ರಿ. ಯಶೋಧರ ಅಮೃತಮತಿ ಅಂತಃಪುರದಲ್ಲಿ ಮಲಗಿದ್ದಾರೆ. ಅಂತಃಪುರದ ಹತ್ತಿರದ ಮನೆಯಲ್ಲಿ ರಾಜನ ಮಾವಟಿಗನು ಹಾಡುತ್ತಾನೆ. ಮುಂದಿನ ಕಥಾಭಾಗ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೨೩. ಕವಿವಿಚಾರ:**- ಆಂಡಯ್ಯ. ಕಾಲ ಕ್ರಿ. ಶ. ಸು. ೧೨೩೫. ಜೈನ. ಇವನ 'ಕಬ್ಬಿಗರ ಕಾವ' ಸುಪ್ರಸಿದ್ಧವಾದ ಕಾವ್ಯ. ಇದು ಅಚ್ಚಗನ್ನಡದಲ್ಲಿ ಬರೆದ ಕಾವ್ಯ. ತದ್ಭವಗಳು ಹೇರಳವಾಗಿ ಉಪಯೋಗವಾಗಿವೆ. ಸಂಸ್ಕೃತ ಶಬ್ದ ಮಿಶ್ರವಿಲ್ಲದೆ ಅಚ್ಚಗನ್ನಡದಲ್ಲಿ ಬರೆದ ಕವಿಯೆಂದರೆ ಇವನೊಬ್ಬನೇ.

**೨೪. ಸಂದರ್ಭ:**- ಈಶ್ವರನು ಮನ್ಮಥನ ಗೆಳೆಯನಾದ ಚಂದ್ರನನ್ನು ಸೆರೆಯಲ್ಲಿ ಟ್ಟಿರುತ್ತಾನೆ. ಅವನನ್ನು ಬಿಡಬೇಕೆಂದು ಮನ್ಮಥನು ತನ್ನ ದೂತನಾದ ಗಾಳಿಯನ್ನು ಈಶ್ವರ

ನಲ್ಲಿಗೆ ಕಳಿಸುತ್ತಾನೆ. ಈಶ್ವರನು ಯುದ್ಧಮಾಡಿ ಬಿಡಿಸಿಕೊಂಡು ಹೋಗೆಂದು ದೂತನನ್ನು ತಿರುಗಿ ಕಳಿಸಿಬಿಡುತ್ತಾನೆ. ದೂತನು ಆ ಸಮಾಚಾರವನ್ನು ಮನ್ಮಥನಿಗೆ ತಿಳಿಸುತ್ತಾನೆ. ಅದನ್ನು ಕೇಳಿ ಮನ್ಮಥನು ತನ್ನ ಪ್ರತಾಪವನ್ನು ಮೆರೆಯುತ್ತಾನೆ.

**೨೫.** ಮನ್ಮಥವಸಂತರು ಸಂತೋಷದಿಂದ ವನವಿಹಾರದಲ್ಲಿರುವ ವರ್ಣನೆ ಈ ಪದ್ಯಗಳಲ್ಲಿದೆ.

**೨೬. ಕವಿ ವಿಚಾರ:-** ಚಾಮರಸ. ಕಾಲ ಕ್ರಿ. ಶ. ಸುಮಾರು ೧೪೩೦. ವೀರಶೈವ. ಕ್ರಿ. ಶ. ೧೪೧೯-೧೪೪೬ ರ ವರೆಗೆ ವಿಜಯನಗರದಲ್ಲಿ ಆಳಿದ ಪ್ರೌಢದೇವರಾಯನ ಆಸ್ಥಾನ ಪಂಡಿತನಾಗಿದ್ದವನು. ಇವನ ಕೃತಿ "ಪ್ರಭುಲಿಂಗಲೀಲೆ" ಬಹಳ ಪ್ರಸಿದ್ಧವಾಗಿದೆ. ಇದು ತೆಲುಗು, ತಮಿಳು ಭಾಷೆಗಳಲ್ಲಿ ಬಹಳ ಹಿಂದಿನ ಕಾಲಕ್ಕೆ ಪರಿವರ್ತಿತವಾಗಿದೆ.

**ಸಂದರ್ಭ :-** ಪ್ರಭುಲಿಂಗಲೀಲೆಯಲ್ಲಿ ವೀರಶೈವರಲ್ಲಿ ಜ್ಞಾನಯೋಗಿಯೆನಿಸಿದ ಅಲ್ಲಮಪ್ರಭುವಿನ ಚರಿತ್ರೆ ವರ್ಣಿತವಾಗಿದೆ. ಶಿವನ ಗಣನಾಥನು ಅಲ್ಲಮಪ್ರಭುವಾಗಿ ಭೂಲೋಕದಲ್ಲಿ ಅವತರಿಸಿದನು. ಅವನ ವೈರಾಗ್ಯವನ್ನು ಪರೀಕ್ಷಿಸುವುದಕ್ಕೆ ಪಾರ್ವತಿಯ ತಾಮಸಗುಣ ಮಾಯೆಯಾಗಿ ಅವತರಿಸಿತು. ಈ ಮಾಯೆಯ ತಂದೆಯ ಹೆಸರು, ಮಮಕಾರಪ್ರಭು. ತಾಯಿಯ ಹೆಸರು ಮೋಹಿನೀದೇವಿ. ಸ್ಥಳ ಬನವಾಸಿ. ಮಾಯೆಯ ಬಾಲ್ಯವನ್ನು ಈ ಪದ್ಯಗಳಲ್ಲಿ ವರ್ಣಿಸಿದೆ.

**೨೭. ಕವಿ ವಿಚಾರ:-** ನಾರಣಪ್ಪ. ಕಾಲ ಕ್ರಿ. ಶ. ಸುಮಾರು ೧೪೩೦. ಬ್ರಾಹ್ಮಣ. 'ಕುಮಾರವ್ಯಾಸ' ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಧಾರವಾಡ ಜಿಲ್ಲೆಯ ಕೋಳಿವಾಡದ ಶಾನುಭೋಗನೆಂದು ಹೇಳುತ್ತಾರೆ. ಗದುಗಿನ ವೀರನಾರಾಯಣನ ಭಕ್ತನು. ಆತನ ಅನುಗ್ರಹದಿಂದ ಕರ್ನಾಟಕ ಮಹಾಭಾರತವನ್ನು ಬರೆದನು. ಕನ್ನಡ ನಾಡಿನಲ್ಲೆಲ್ಲಾ ಮಹಾಭಾರತ ಬಹಳ ಪ್ರಸಿದ್ಧವಾಗಿದೆ. ಈತನು ಉತ್ತಮ ವರ್ಗದ ಕವಿ.

**ಸಂದರ್ಭ :-** ದ್ರುಪದರಾಜನ ಪಟ್ಟಣಕ್ಕೆ ದ್ರೌಪದಿಯ ಸ್ವಯಂವರಕ್ಕಾಗಿ ಎಲ್ಲಾ ದೇಶದ ರಾಜರುಗಳು ಬಂದಿರುತ್ತಾರೆ. ದ್ರುಪದನು ಮತ್ಸ್ಯಯಂತ್ರವನ್ನು ಭೇದಿಸಿದವರಿಗೆ ದ್ರೌಪದಿಯನ್ನು ಕೊಟ್ಟು ಮದುವೆಮಾಡುತ್ತೇನೆಂದು ಡಂಗುರವನ್ನು ಸಾರಿಸುತ್ತಾನೆ. ರಾಜರಲ್ಲಿ ಯಾರೂ ಮತ್ಸ್ಯಯಂತ್ರವನ್ನು ಹೊಡೆಯಲಿಲ್ಲ. ಪಾಂಡವರು ಅರಗಿನ ಮನೆಯಿಂದ ಬದುಕಿ ರೂಪವನ್ನು ಮರೆಸಿಕೊಂಡು ಬ್ರಾಹ್ಮಣರ ಗುಂಪಿನಲ್ಲಿ ಬ್ರಾಹ್ಮಣರಾಗಿ ಕುಳಿತಿರುತ್ತಾರೆ. ಆಗ ದ್ರುಪದನು ಬ್ರಾಹ್ಮಣರು ಯಾರಾದರೂ ಮತ್ಸ್ಯಯಂತ್ರವನ್ನು ಭೇದಿಸಬಹುದೆಂದು ಡಂಗುರವನ್ನು ಸಾರುತ್ತಾನೆ. ಇಲ್ಲಿಂದ ಕಥೆ ಆರಂಭವಾಗುತ್ತದೆ.

**೨೮. ಸಂದರ್ಭ :-** ಪಾಂಡವರು ವಿರಾಟರಾಜನಲ್ಲಿ ರೂಪ ಮರೆಸಿಕೊಂಡು ಅಜ್ಞಾತವಾಸದಲ್ಲಿದ್ದಾರೆ. ಕೌರವನು ವಿರಾಟರಾಜನ ಗೋಗಳನ್ನು ಹಿಡಿಯುತ್ತಾನೆ.

ಗೋಪಾಲಕರು ಕೌರವನ ಸೇನೆಯೊಡನೆ ಯುದ್ಧ ಮಾಡಲು ಸಮರ್ಥರಾಗಲಿಲ್ಲ. ಒಬ್ಬ ಗೋಪಾಲಕನು ಓಡಿ ಬಂದು ತಮಗೆ ಉಂಟಾದ ಪರಾಭವವನ್ನು ಉತ್ತರನಿಗೆ ಹೇಳುತ್ತಾನೆ. ಆಗ ಉತ್ತರನು ಅಂತಃಪುರದ ಸ್ತ್ರೀಯರ ಮಧ್ಯದಲ್ಲಿ ಇರುತ್ತಾನೆ. ಉತ್ತರನ ಪೌರುಷವನ್ನು ಈ ಭಾಗದಲ್ಲಿ ಕವಿ ಬಹಳ ಹಾಸ್ಯಮಯವಾಗಿ ಚಿತ್ರಿಸಿದ್ದಾನೆ.

**೨೯. ಸಂದರ್ಭ**– ಶ್ರೀಕೃಷ್ಣನು ಸಂಧಿಗಾಗಿ ಕೌರವನನ್ನು ಒಪ್ಪಿಸಲು ಬಂದನು. ಕೌರವನು ಒಪ್ಪಲಿಲ್ಲ. ಶ್ರೀಕೃಷ್ಣನು ಕೌರವನ ಸಭೆಯಿಂದ ಮರಳಿದನು. ಆಗ ತನ್ನನ್ನು ಕಳಿಸುವದಕ್ಕೆ ಬಂದ ಕರ್ಣನನ್ನು ಪ್ರತ್ಯೇಕವಾಗಿ ಕರೆದು ರಥದಲ್ಲಿ ಕುಳ್ಳಿರಿಸಿಕೊಳ್ಳುವ ಸಂದರ್ಭದಿಂದ ಇಲ್ಲಿನ ಕಥೆ ಆರಂಭವಾಗುತ್ತದೆ.

**೩೦. ಕವಿ ವಿಚಾರ :**- ಕವಿ, ಕನಕದಾಸ. ಕಾಲ, ಹದಿನಾರನೆಯ ಶತಮಾನದ ಮಧ್ಯಭಾಗ. ಕುರುಬ. ವಿಷ್ಣುಭಕ್ತ. ಮೊದಲನೆಯ ಹೆಸರು ತಿಮ್ಮ. ವಿಜಯನಗರದ ಕೃಷ್ಣದೇವರಾಯನಿಗೆ ಗುರುವಾದ, ವ್ಯಾಸರಾಯರಿಗೆ ಶಿಷ್ಯನಾದನು. ಆ ಮೇಲೆ ಕನಕದಾಸನೆಂಬ ಹೆಸರು ಬಂತು. ಧಾರವಾಡ ಜಿಲ್ಲೆಯ ಬಾಡ ಎಂಬ ಹಳ್ಳಿ ಇವನ ಹುಟ್ಟಿದ ಊರು. ಇವನು ಅನೇಕ ಪದಗಳನ್ನು ಬರೆದಿದ್ದಾನೆ. ಮೋಹನ ತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತ್ರೆ, ಹರಿಭಕ್ತಿಸಾರ, ದೇವರ ನಾಮಗಳು—ಇವು ಇವನ ಕೃತಿಗಳು.

**ಸಂದರ್ಭ :**– ನಳನು ರಾಜ್ಯವನ್ನು ಸೋತು ಪತ್ನಿಯೊಡನೆ ಅಡವಿಗೆ ಬರುತ್ತಾನೆ. ಒಂದು ರಾತ್ರಿ ಒಂದು ಗಿಡದ ಕೆಳಗೆ ಪತ್ನಿಪುತ್ರರೊಡನೆ ಮಲಗಿರುತ್ತಾನೆ. ಆ ರಾತ್ರಿ ಪತ್ನಿಯಿಂದ ಅಗಲಿ ತಾನೊಬ್ಬನೇ ಹೊರಟುಹೋಗುತ್ತಾನೆ. ದಾರಿಯಲ್ಲಿ ನಡೆದ ಸಂಗತಿ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೩೧. ಕವಿ ವಿಚಾರ :**– ಪುರಂದರದಾಸ. ಕಾಲ, ಕ್ರಿ. ಶ. ೧೬ ನೆಯ ಶತಮಾನದ ಮಧ್ಯಭಾಗ. ಬ್ರಾಹ್ಮಣ. ವ್ಯಾಸರಾಯರ ಶಿಷ್ಯ. ಹುಟ್ಟಿದ ಸ್ಥಳ ಪುರಂದರಗಡ. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದಲ್ಲಿ ಇದ್ದನು. ಸಹಸ್ರಾರು ದೇವರ ನಾಮಗಳನ್ನು ಬರೆದಿದ್ದಾನೆ. ದಾಸ ಸಾಹಿತ್ಯಕ್ಕೆ ಮೂಲ ಪುರುಷನೆಂದು ಪ್ರಖ್ಯಾತಿಯಿದೆ. ಕರ್ನಾಟಕ ಸಂಗೀತವನ್ನು ಉದ್ಧರಿದಾತನು. ಈತನ ಕೀರ್ತನೆಗಳು ಕನ್ನಡ ನಾಡಿನಲ್ಲೆಲ್ಲ ಬಹಳ ಪ್ರಚಾರದಲ್ಲಿವೆ. ಕೀರ್ತನೆಗಳಲ್ಲಿ 'ಪುರಂದರ ವಿಟ್ಠಲ' ಎಂಬ ಅಂಕಿತವಿರುತ್ತದೆ.

**೩೪. ಕವಿ ವಿಚಾರ :**– ಸರ್ಪಭೂಷಣ ಶಿವಯೋಗಿ. ಕಾಲ, ಕ್ರಿ. ಶ. ಸುಮಾರು ೧೮೨೦. ವ್ಯವಹಾರ ನಾಮ ಸಪ್ಪಣ್ಣ. ಅಂಕಿತ "ಗುರುಸಿದ್ಧ". ಕೈವಲ್ಯಕಲ್ಪವಲ್ಲರಿ ಎಂಬುದು ಇವನ ಕೃತಿ. ಇದರಲ್ಲಿ ಕೀರ್ತನೆಗಳಿವೆ.

**೩೫. ಕವಿ ವಿಚಾರ:**– ರತ್ನಾಕರವರ್ಣಿ. ಕಾಲ, ಹದಿನಾರನೆಯ ಶತಮಾನದ ಉತ್ತರಾರ್ಧ. ಜೈನ. ಸ್ಥಳ – ವೇಣುಪುರ (ಮೂಡಬಿದರೆ). ಈತನ ಭರತೇಶ ವೈಭವ

ಬಹಳ ಪ್ರಸಿದ್ಧವಾಗಿದೆ. ಕೆಲವು ಶತಕಗಳನ್ನೂ ಬರೆದಿದ್ದಾನೆ. ಭರತೇಶ್ವವೈಭವ ಸಾಂಗತ್ಯವೆಂಬ ಛಂದಸ್ಸಿನಲ್ಲಿ ಬರೆದಿದೆ. ಇದು ದೊಡ್ಡ ಗ್ರಂಥ. ಕವಿ ಒಂಬತ್ತು ತಿಂಗಳಲ್ಲಿ ಮುಗಿಸಿದಂತೆ ಹೇಳಿದ್ದಾನೆ. ಇವನು ಶ್ರೇಷ್ಠ ಕವಿ, ಭರತೇಶವೈಭವ ಪಂಡಿತರಿಗೂ ಪಾಮರರಿಗೂ ಮನೋರಂಜಕವಾಗಿದೆ. "ನಾಟಕಶಾಲೆ" ಎಂಬುದನ್ನು ಭರತೇಶವೈಭವದಿಂದ ಆಯ್ದುಕೊಂಡಿದೆ.

**೩೬. ಕವಿ ವಿಚಾರ :**- ವಿರೂಪಾಕ್ಷ ಪಂಡಿತ. ಕಾಲ, ಕ್ರಿ. ಶ. ಸುಮಾರು ೧೫೮೪. ವೀರಶೈವ. ಇವನು ಸುಪ್ರಸಿದ್ಧನಾದ ಕವಿ. ಕೃತಿ- ಚೆನ್ನಬಸವ ಪುರಾಣ. ಕನ್ನಡ ನಾಡಿನಲ್ಲೆಲ್ಲ ಬಹಳ ಪ್ರಚಾರದಲ್ಲಿದೆ ಇದರಿಂದಲೇ "ಕಲ್ಯಾಣದೇಶ"ದ ವರ್ಣನೆಯನ್ನು ಆಯ್ದುಕೊಂಡಿದೆ.

**೩೭. ಕವಿ ವಿಚಾರ :**- ಚಾಟುವಿಟ್ಠಲನಾಥ. ಕಾಲ ಹದಿನಾರನೆಯ ಶತಮಾನ. – ಬ್ರಾಹ್ಮಣ. ಈತನ ನಿಜವಾದ ಹೆಸರು ಸದಾನಂದಯೋಗಿ ಆಗಿರಬಹುದು. ನಿತ್ಯಾತ್ಮ ಶುಕಯೋಗಿ ಎಂಬ ಬಿರುದು. ಕೃತಿ– ಭಾಗವತ ಮತ್ತು ಭಾರತದಲ್ಲಿಯ ಕೆಲವು ಪರ್ವಗಳು ಕನ್ನಡನಾಡಿನಲ್ಲಿ ಕುಮಾರವ್ಯಾಸನ ಮಹಾಭಾರತವು ಪ್ರಸಿದ್ಧವಾಗಿರುವಂತೆ ಇವನ ಭಾಗವತವೂ ಪ್ರಚಾರದಲ್ಲಿದೆ.

**ಸಂದರ್ಭ :**- ಶ್ರೀಕೃಷ್ಣನು ಕಾಳಿಯ ಎಂಬ ಸರ್ಪದ ಗರ್ವವನ್ನು ಮುರಿದ ಪ್ರಸಂಗವು ಈ ಭಾಗದಲ್ಲಿ ವರ್ಣಿತವಾಗಿದೆ.

**೩೮. ಕವಿ ವಿಚಾರ :**- ನರಹರಿ. ಕಾಲ, ಹದಿನಾರನೆಯ ಶತಮಾನ. ಬ್ರಾಹ್ಮಣ. ಸ್ಥಳ-ಸೊಲ್ಲಾಪುರ ಜಿಲ್ಲೆಯ ತೊರವೆ. ಕುಮಾರ ವಾಲ್ಮೀಕಿ ಎಂಬುದು ಈತನ ಬಿರುದು. ಇವನ ರಾಮಾಯಣವು ತೊರವೆರಾಮಾಯಣ ಎಂಬ ಹೆಸರಿನಲ್ಲಿ ಭಾರತ ಭಾಗವತಗಳಂತೆ ಕನ್ನಡನಾಡಿನಲ್ಲಿ ಬಹಳ ಪ್ರಚಾರದಲ್ಲಿದೆ. ಇವನು ಉತ್ತಮ ಕವಿ

**ಸಂದರ್ಭ :**- ಶ್ರೀ ರಾಮನಿಗೆ ಪಟ್ಟಾಭಿಷೇಕವಾಗಬೇಕೆಂದು ನಿಶ್ಚಯವಾಗಿರುತ್ತದೆ. ಕೈಕೆ ರಾಮನು ವನವಾಸಕ್ಕೆ ಹೋಗಬೇಕೆಂದೂ ತನ್ನಮಗ ಭರತನಿಗೆ ಪಟ್ಟಾಭಿಷೇಕವಾಗಬೇಕೆಂದೂ, ದಶರಥನಿಗೆ ಹೇಳುತ್ತಾಳೆ. ಆಸಂದರ್ಭದಲ್ಲಿ ಶ್ರೀ ರಾಮನು ಪಟ್ಟಾಭಿಷೇಕ ಮಾಡಿಕೊಳ್ಳಲು ತಂದೆಯ ಆಶೀರ್ವಾದಕ್ಕಾಗಿ ಬರುತ್ತಾನೆ. ಮುಂದೆ ನಡೆದ ಸಂಗತಿ ಈ ಪದ್ಯಗಳಲ್ಲಿ ವರ್ಣಿತವಾಗಿದೆ.

**೩೯. ಕವಿ ವಿಚಾರ:**- ಷಡಕ್ಷರದೇವ. ಕಾಲ, ಕ್ರಿ. ಶ. ಸುಮಾರು ೧೬೭೮ ಮೈಸೂರು ದೊರೆಯಾದ ಚಿಕದೇವರಾಜನ ಕಾಲದಲ್ಲಿದ್ದನು. ವೀರಶೈವ. ಸ್ಥಳ– ಮೈಸೂರ ಸೀಮೆಯಲ್ಲಿಯ ಯಳಂದೂರು. ಚಿಕ್ಕ ವಯಸ್ಸಿನಿಂದಲೇ ಕವಿತಾ ಶಕ್ತಿ ಅಂಕುರಿಸಿತೆಂದ ತಾನೇ ಹೇಳುತ್ತಾನೆ. ದೊಡ್ಡ ಪಂಡಿತ ಕವಿ. ಪ್ರತಿಭಾಶಾಲಿ. ಕೃತಿಗಳು– ರಾಜಶೇಖ

ವಿಲಾಸ, ವೃಷಭೇಂದ್ರ ವಿಜಯ, ಶಬರ ಶಂಕರ ವಿಲಾಸ. ರಾಜಶೇಖರ ವಿಲಾಸವು ಕನ್ನಡ ನಾಡಿನಲ್ಲಿ ಸರ್ವಮಾನ್ಯವಾದ ಕೃತಿಯಾಗಿದೆ.

ಸಂದರ್ಭ:- ರಾಜಶೇಖರನೆಂಬ ರಾಜಕುಮಾರನು ಮಂತ್ರಿಯ ಮಗನೊಡನೆ ಕುದುರೆ ಹತ್ತಿಕೊಂಡು ವಿಹಾರಕ್ಕಾಗಿ ಹೋಗಿ ತಿರುಗಿ ಬರುತ್ತಿದ್ದಾಗ, ನಡು ಬೀದಿಯಲ್ಲಿ ತಿರುಕೊಳವಿನಾಚಿಯೆಂಬ ಶಿವಭಕ್ತೆಯ ಮಗನು ಕುದುರೆಯ ಕಾಲಿಗೆ ಸಿಕ್ಕಿ ಸತ್ತುಹೋಗುತ್ತಾನೆ. ತಿರುಕೊಳವಿನಾಚಿ ನೀರಿಗೆ ಹೋಗಿರುತ್ತಾಳೆ. ತಿರುಗಿ ಮನೆಗೆ ಬರುವುದರೊಳಗಾಗಿ ಮಗನು ಸತ್ತ ವರ್ತಮಾನ ಗೊತ್ತಾಗುತ್ತದೆ. ಮಗನಲ್ಲಿಗೆ ಬಂದು ತಿರುಕೊಳವಿನಾಚಿ ಪ್ರಲಾಪಿಸುತ್ತಾಳೆ. ಕವಿ ಈ ಭಾಗವನ್ನು ಇಲ್ಲಿ ಬಹು ಮನೋಹರವಾಗಿ ವರ್ಣಿಸುತ್ತಾನೆ.

೪೦. ಕವಿ ವಿಚಾರ:- ಕವಿ ತನ್ನ ಹೆಸರನ್ನು ಲಕ್ಷ್ಮೀಶನೆಂದೂ, ಲಕ್ಷ್ಮೀಪತಿಯೆಂದೂ ಹೇಳಿಕೊಂಡಿದ್ದಾನೆ. ಲಕ್ಷ್ಮೀಶನೆಂದೇ ಪ್ರಸಿದ್ಧನಾಗಿದ್ದಾನೆ. ಕಾಲದ ವಿಷಯದಲ್ಲಿ ವಿವಾದವಿದೆ. ಹದಿನೇಳನೆಯ ಶತಮಾನದವನಾಗಬಹುದು. ಬ್ರಾಹ್ಮಣ. ಈತನ ಸ್ಥಳದ ವಿಚಾರವಾಗಿಯೂ ಭಿನ್ನಾಭಿಪ್ರಾಯವಿದೆ. ಮೈಸೂರು ಸೀಮೆಯ ದೇವನೂರು ಎಂದು ಕೆಲವರೂ, ಹೈದರಾಬಾದ್ ಪ್ರಾಂತದಲ್ಲಿರುವ ಸುರಪುರ ಅಥವಾ ಅದರ ಹತ್ತಿರದ ದೇವಪುರ ಇವನ ಸ್ಥಳವೆಂದು ಕೆಲವರೂ ಅಭಿಪ್ರಾಯ ಪಡುತ್ತಾರೆ. ಇವನು ಬಳಸಿದ ಭಾಷೆಯನ್ನು ನೋಡಿದರೆ ಈ ಕವಿ ಹೈದರಾಬಾದ್ ಪ್ರಾಂತದವನು ಆಗಿರಬೇಕೆಂದು ತೋರುತ್ತದೆ. ಇವನು ಕನ್ನಡ ನಾಡಿನಲ್ಲಿ ಬಹಳ ಪ್ರಸಿದ್ಧ ಕವಿ. ಇವನು ಬರೆದ ಜೈಮಿನಿ ಭಾರತವು ಕನ್ನಡಿಗರ ಪ್ರೀತಿ ಆದರಗಳಿಗೆ ಪಾತ್ರವಾಗಿದೆ.

ಸಂದರ್ಭ:- ಧರ್ಮರಾಜನು ಅಶ್ವಮೇಧಯಾಗ ಮಾಡಬೇಕೆಂದು ನಿಶ್ಚಯವಾಗಿರುತ್ತದೆ. ಈ ಯಾಗಕ್ಕೆ ಬೇಕಾದ ಕುದುರೆ ಯೌವನಾಶ್ವನೆಂಬ ರಾಜನಲ್ಲಿ ಇರುತ್ತದೆ. ಆ ಕುದುರೆಯನ್ನು ತರುವುದಕ್ಕೆ ಭೀಮ, ಕರ್ಣನ ಮಗನಾದ ವೃಷಕೇತು, ಘಟೋತ್ಕಚನ ಮಗನಾದ ಮೇಘನಾದ, ಹೋಗಿರುತ್ತಾರೆ. ಮೇಘನಾದನು ಯೌವನಾಶ್ವನಿಂದ ಕುದುರೆಯನ್ನು ಮಾಯೆಕವಿಸಿ ತೆಗೆದುಕೊಂಡು ಬರುತ್ತಾನೆ. ಆ ಕುದುರೆಯನ್ನು ತಿರುಗಿಬಿಡಿಸಿಕೊಂಡು ಹೋಗಬೇಕೆಂದು ಯೌವನಾಶ್ವನು ಸೇನೆಯೊಡನೆ ಯುದ್ಧಕ್ಕೆ ಬರುತ್ತಾನೆ. ವೃಷಕೇತುವಿಗೂ ಯೌವನಾಶ್ವನಿಗೂ ನಡೆದ ಯುದ್ಧ ಇಲ್ಲಿ ವರ್ಣಿತವಾಗಿದೆ.

೪೧. ಸಂದರ್ಭ- ಧರ್ಮರಾಜನು ಯಜ್ಞಾಶ್ವವನ್ನು ಬಿಡುತ್ತಾನೆ. ಅದು ಅಲೆಯುತ್ತ ಅಲೆಯುತ್ತ ಹೋಗುವಾಗ ದಾರಿಯಲ್ಲಿ ಒಂದು ಬಂಡೆಯಲ್ಲಿ ಅದರ ಕಾಲು ಸಿಕ್ಕಿಕೊಳ್ಳುತ್ತದೆ. ಕುದುರೆಯ ಮೈಗಾವಲಿಗೆ ಇದ್ದ ಅರ್ಜುನನು ಇದಕ್ಕೆ ಮುನಿಗಳ ಶಾಪವೇನಾದರೂ ಇರಬಹುದು ಎಂದು ಯೋಚಿಸಿ ಹತ್ತಿರದಲ್ಲಿದ್ದ ಸೌಭರಿ ಮುನಿಯ ಆಶ್ರಮಕ್ಕೆ ಹೋಗಿ ಕುದುರೆ ಕಲ್ಲಿ

ನಲ್ಲಿ ಸಿಕ್ಕಿ ಬಿದ್ದಿರುವ ಸಮಾಚಾರವನ್ನು ತಿಳಿಸುತ್ತಾನೆ. ಆ ಋಷಿ ಕುಮರಿ ಅಲ್ಲಿ ಸಿಕ್ಕಿರುವು ದಕ್ಕೆ ಕಾರಣವನ್ನು ಹೇಳುತ್ತಾನೆ. ಅದು ಇಲ್ಲಿ ವರ್ಣಿತವಾಗಿದೆ.

**೪೨.** ಸಂದರ್ಭ–ಶ್ರೀರಾಮನು ಅಗಸನ ನಿಂದೆಯ ಮೇಲೆ ಗರ್ಭಿಣಿಯಾದ ಸೀತೆ ಯನ್ನು ಅರಣ್ಯಕ್ಕೆ ಕಳಿಸಿಕೊಡುತ್ತಾನೆ. ಲಕ್ಷ್ಮಣನು ಸೀತೆಯನ್ನು ಕರೆದುಕೊಂಡುಹೋಗಿ ಅರಣ್ಯದಲ್ಲಿ ಬಿಟ್ಟು ಬರುವಾಗ ಅರಣ್ಯದಲ್ಲಿನ ವೃಕ್ಷ ಮೊದಲಾದವುಗಳನ್ನು ಉದ್ದೇಶಿಸಿ ಹೇಳಿದ ಪ್ರಸಂಗವು ಈ ಮುಂದಿನ ಪದ್ಯಗಳಲ್ಲಿ ವರ್ಣಿತವಾಗಿದೆ.

**೪೩.** **ಕವಿ ವಿಚಾರ** ಕವಿಯ ಹೆಸರು ಸೋಮನಾಥ ಅಥವಾ ಸೋಮೇಶ್ವರ ಆಗಿರ ಬೇಕು. ಹನ್ನೆರಡನೆಯ ಅಥವಾ ಹದಿಮೂರನೆಯ ಶತಮಾನದಲ್ಲಿದ್ದ ಪಾಲ್ಕುರಿಕೆ ಸೋಮ ನಾಥನು ಸೋಮೇಶ್ವರ ಶತಕವನ್ನು ಬರೆದಿರಬೇಕೆಂದು ಹೇಳುತ್ತಾರೆ. ರತ್ನಾಕರ ವರ್ಣಿ ವೀರಶೈವಮತವನ್ನು ಸ್ವೀಕಾರ ಮಾಡಿದಾಗ ಈ ಶತಕವನ್ನು ಬರೆದನೆಂದೂ ಹೇಳುತ್ತಾರೆ. ಆದರೆ ಕವಿಯ ವಿಷಯ ಇನ್ನೂ ಯಾವುದೂ ಇತ್ಯರ್ಥವಾಗಿಲ್ಲ. ಸೋಮನಾಥ ಅಥವಾ ಸೋಮೇಶ್ವರ ಎಂಬ ಕವಿ ಈ ಶತಕವನ್ನು ಬರೆದಂತೆ ಕಾಣುತ್ತದೆ. ಶೈವಮತ. ಸೋಮೇ ಶ್ವರ ಶತಕ ನೀತಿಬೋಧಕವಾದ ೧೦೮ ಪದ್ಯಗಳುಳ್ಳ ಶತಕ. ಇದು ಕನ್ನಡನಾಡಿನಲ್ಲೆಲ್ಲ ಬಹಳ ಪ್ರಚಾರದಲ್ಲಿ ಇದೆ.

**೪೪–೪೫.** **ಕವಿ ವಿಚಾರ** - ಹೊನ್ನಮ್ಮ. ಸಂಚಿಯ ಹೊನ್ನಮ್ಮನೆಂದು ಪ್ರಸಿದ್ಧ ಳಾಗಿದ್ದಾಳೆ. ಕ್ರಿ. ಶ. ೧೬೭೨ ರಿಂದ ೧೭೦೪ ರ ವರೆಗೆ ಆಳಿದ ಮೈಸೂರಿನ ಚಿಕ ದೇವರಾಜ ಒಡೆಯರ ಆಸ್ಥಾನದಲ್ಲಿ ಊಳಿಗದವಳಾಗಿ ಇದ್ದಳು. ಶೂದ್ರ ವರ್ಣದವಳು. ಕನ್ನಡಸಾಹಿತ್ಯದಲ್ಲಿ ಕವಿಯಿತ್ರಿಯರಲ್ಲಿ ಪ್ರಸಿದ್ಧಳಾಗಿದ್ದಾಳೆ. ಇವಳ "ಹದಿಬದೆಯ ಧರ್ಮ" ಎಂಬ ಕೃತಿ ಸ್ತ್ರೀಧರ್ಮವನ್ನು ಬೋಧಿಸುತ್ತದೆ

**೪೬.** **ಕವಿ ವಿಚಾರ** ಸರ್ವಜ್ಞ. ಕಾಲ ೧೭೦೦. ವೀರಶೈವ. ಕನ್ನಡನಾಡಿನಲ್ಲಿ ಎಲ್ಲರ ಪ್ರೀತಿಗೆ ಪಾತ್ರನಾದ ಕವಿ. ಇವನ ವಚನಗಳು ಸರ್ವಜ್ಞ ವಚನಗಳೆಂದು ಪ್ರಸಿದ್ಧವಾ ಗಿವೆ. ಈ ವಚನಗಳಲ್ಲಿ ಕವಿ ಅನೇಕ ವಿಷಯಗಳನ್ನು ಎಲ್ಲರ ಮನಸ್ಸಿಗೆ ಹಿಡಿಯುವಂತೆ ಹೇಳುತ್ತಾನೆ. ಸರ್ವಜ್ಞನ ವಚನಗಳು ಹೆಚ್ಚಾಗಿ ನೀತಿಬೋಧಕವಾಗಿಯೂ ಅನುಭವ ಯುಕ್ತವಾಗಿಯೂ ಇವೆ. "ತ್ರಿಪದಿ"ಯೆಂಬ ಜಾತಿಯ ಛಂದಸ್ಸಿನಲ್ಲಿ ಈ ವಚನಗಳು ರಚಿತವಾಗಿವೆ. ಸ್ಥಳ—ಧಾರವಾಡ ಜಿಲ್ಲೆ.

**೪೭–೪೮.** ವಿವಿಧ ಅಂಕಿತವುಳ್ಳ ಕವಿಗಳಿಂದ ರಚಿತವಾಗಿವೆ.

**೪೯.** ಮೂರ್ಖಶತಕವೆಂಬ ಸಂಸ್ಕೃತ ಗ್ರಂಥದ ಕನ್ನಡ ಅನುವಾದದಿಂದ ಈ ಪದ್ಯಗಳನ್ನು ಎತ್ತಿಕೊಂಡಿದೆ.

**೫೦.** **ಕವಿವಿಚಾರ** — ಕಾವ್ಯನಾಮ ಕವಿಶಿಷ್ಯ. ಪೂರ್ಣಹೆಸರು ಪಂಜೆ ಮಂಗೇಶರಾವ್. ಮಂಗಳೂರು ಕಡೆಯವರು. ಮದ್ರಾಸ್ ಪ್ರಾಂತದ ವಿದ್ಯಾಖಾತೆಯಲ್ಲಿ ಅಧಿಕಾರಿಗಳಾಗಿದ್ದುಕೊಂಡು ಕನ್ನಡದ ಸೇವೆಯನ್ನು ಸಲ್ಲಿಸಿ ಕನ್ನಡಜನತೆಯಲ್ಲಿ ಜಾಗ್ರತಿಯನ್ನು ಉಂಟುಮಾಡಿದವರಲ್ಲಿ ಇವರು ಮುಖ್ಯರು. ಇವರು ಪಂಡಿತರೂ, ಪ್ರತಿಭಾಶಾಲಿಗಳೂ, ರಸಿಕರೂ, ಸರಳಸ್ವಭಾವದವರೂ ಆಗಿದ್ದರು. ಹತ್ತು ವರ್ಷಗಳ ಕೆಳಗೆ ಇವರು ಹೈದರಾಬಾದಿನಲ್ಲಿ ದೈವಾಧೀನರಾದರು. ಇವರ ಹುತ್ತರಿಹಾಡು, ನಾಗರ ಹಾವು, ತೆಂಕಣಗಾಳಿಯಾಟ ಮುಂತಾದುವುಗಳು ಜನಪ್ರಿಯ ಕವನಗಳು. ಕನ್ನಡದಲ್ಲಿ ಹೊಸ ಛಂದಸ್ಸಿನ ಪ್ರಯೋಗವನ್ನು ಮೊದಲು ಮಾಡಿದವರಲ್ಲಿ ಇವರೊಬ್ಬರು. ಮಕ್ಕಳಿಗಾಗಿ ಬಾಲಸಾಹಿತ್ಯವನ್ನು ಸೃಜಿಸಿದರು. ಇವರ ಗದ್ಯಶೈಲಿ ಮನೋಹರವಾಗಿದೆ.

**೫೧.** **ಕವಿವಿಚಾರ** — ಕಾವ್ಯನಾಮ ಶ್ರೀ. ಪೂರ್ಣಹೆಸರು ಬಿ. ಎಂ. ಶ್ರೀಕಂಠಯ್ಯ. ಸ್ಥಳ — ಮೈಸೂರು ಪ್ರಾಂತ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿಯೂ, ಕೆಲವು ವರ್ಷ ಗೌರವ ಕನ್ನಡ ಪ್ರಾಧ್ಯಾಪಕರಾಗಿಯೂ ಇದ್ದರು. ಇಂಗ್ಲಿಷು, ಸಂಸ್ಕೃತ, ತಮಿಳು, ಸಾಹಿತ್ಯಗಳಲ್ಲಿ ಘನವಿದ್ವಾಂಸರು ಕನ್ನಡದಲ್ಲಿ ಅದ್ವಿತೀಯ ಪಂಡಿತರು. ವಿಮರ್ಶಕರು. ಹೊಸಗನ್ನಡ ಕಾವ್ಯ ಪ್ರಪಂಚದಲ್ಲಿ ಆದಿಪುರುಷರೆಂದು ಖ್ಯಾತಿಹೊಂದಿದ್ದಾರೆ. ಕನ್ನಡನಾಡನ್ನು ಸುತ್ತಿ ಕನ್ನಡ ಜನತೆಯಲ್ಲಿ ಐಕ್ಯಭಾವವನ್ನೂ ಕನ್ನಡದ ಅಭಿಮಾನವನ್ನೂ, ಸಾಹಿತ್ಯಾಭಿರುಚಿಯನ್ನೂ ಉಂಟುಮಾಡಿದರು. ದೊಡ್ಡ ವಾಗ್ಮಿಗಳು. ಈಗ ಕೆಲವು ವರ್ಷಗಳ ಹಿಂದೆ ಧಾರವಾಡದಲ್ಲಿ ಕಾಲಾಧೀನರಾದರು. ಇಂಗ್ಲಿಷ್‌ಗೀತಗಳು, ಗದಾಯುದ್ಧ ನಾಟಕ, ಅಶ್ವತ್ಥಾಮನ್, ಪಾರಸಿಕರು, ಮುಂತಾದುವುಗಳು ಸುಪ್ರಸಿದ್ಧವಾದ ಕೃತಿಗಳು. ಅಶ್ವತ್ಥಾಮನ್ ಹಳಗನ್ನಡದಲ್ಲಿ ಬರೆದ ರುದ್ರನಾಟಕ. ಇವರ ಪ್ರಧಾನ ಸಂಪಾದಕತ್ವದಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಅನೇಕ ಕನ್ನಡ ಗ್ರಂಥಗಳನ್ನು ಪ್ರಕಟಿಸಿದೆ. "ಕನ್ನಡದ ಬಾವುಟ"ವನ್ನು ಇವರೇ ಸಂಪಾದಿಸಿದರು. ಇದೇ ಬಾವುಟದಲ್ಲಿಯ "ಕನ್ನಡತಾಯಿನೋಟ" ಎಂಬ ಅವರ ಕವನದಿಂದ ಈ ಭಾಗವನ್ನು ತೆಗೆದುಕೊಂಡಿದೆ.

**೫೨.** **ಕವಿವಿಚಾರ** — ಡಿ. ವಿ. ಗುಂಡಪ್ಪ. ಮೈಸೂರು ಪ್ರಾಂತದವರು. ಕನ್ನಡ, ಇಂಗ್ಲಿಷು, ಸಂಸ್ಕೃತ ಭಾಷೆಗಳಲ್ಲಿ ದೊಡ್ಡ ಪಂಡಿತರು. ಕನ್ನಡನಾಡಿನ ಹಿರಿಯ ಸಾಹಿತಿಗಳಲ್ಲಿ ಪ್ರಮುಖರು. ಶ್ರೇಷ್ಠವರ್ಗದ ಕವಿಗಳೂ, ವಿಮರ್ಶಕರೂ, ಗದ್ಯಲೇಖಕರೂ, ಆಗಿದ್ದಾರೆ. ಇವರ ಕನ್ನಡದ ಗದ್ಯಶೈಲಿ ಹೃದ್ಯವಾಗಿದೆ. ಒಳ್ಳೆಯ ಪತ್ರಿಕಾಕರ್ತರು

ನಿವೇದನ, ಉಮರ್‌ಖಯ್ಯಾಂ, ಜೀವನಸೌಂದರ್ಯ ಮತ್ತು ಸಾಹಿತ್ಯ, ಸಾಹಿತ್ಯಶಕ್ತಿ, ಶ್ರೀರಾಮ ಪರೀಕ್ಷಣ, ಅಂತಃಪುರ ಗೀತೆಗಳು, ವಿದ್ಯಾರಣ್ಯರು ಮುಂತಾದುವು

ಗಳು ಇವರ ಸರ್ವಾದರಣೀಯವಾದ ಕೃತಿಗಳು. ಇವರ "ಮಂಕುತಿಮ್ಮನ ಕಗ್ಗ"ಎಂಬ ಕೃತಿ ಹೊಸಗನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ.

"ವನಸುಮ"ವೆಂಬ ಸುಪ್ರಸಿದ್ಧವಾದ ಕವನವನ್ನು 'ನಿವೇದನ'ದಿಂದ ಆಯ್ದು ಕೊಂಡಿದೆ.

**೨೩. ಸಂದರ್ಭ**— ಭರತನಭಕ್ತಿಯನ್ನು ಇವರ "ಮಂಕುತಿಮ್ಮನ ಕಗ್ಗ" ದಿಂದ ಎತ್ತಿಕೊಂಡಿದೆ.

**೨೪. ಕವಿವಿಚಾರ**— ಶ್ರೀ ಮಂಜೇಶ್ವರ ಗೋವಿಂದ ಪೈ. ಮಂಗಳೂರು ಕಡೆ ಯವರು. ಇವರು ಕನ್ನಡಕ್ಕೆ ಸಲ್ಲಿಸಿದ ಸೇವೆಯನ್ನು ಗಮನಿಸಿ, ಮದ್ರಾಸು ಪ್ರಭುತ್ವವು ಇವ ರಿಗೆ 'ರಾಷ್ಟ್ರಕವಿ'ಯೆಂಬ ಬಿರುದನ್ನು ಕೊಟ್ಟಿದೆ. ಕನ್ನಡ ಸಂಶೋಧನೆಯಲ್ಲಿ ತುಂಬ ನುರಿತ ವಿದ್ವಾಂಸರು. ಅನೇಕ ಮಹತ್ತ್ವಪೂರ್ಣ ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಇವರ ಗಿಳಿವಿಂಡು, ಹೆಬ್ಬೆರಳು, ಗೊಲ್ಗೊಥಾ, ಉಮರ್‌ಖಯಾಂ ಮುಂತಾದ ಕೃತಿಗಳು ಪ್ರೌಢಶೈಲಿಯಲ್ಲಿ ರಚಿತವಾಗಿವೆ.

**ಸಂದರ್ಭ**— ಏಸುಕ್ರಿಸ್ತನು ಯಹೋದ್ಯರ ರಾಜನೆಂದು ಹೇಳಿಕೊಳ್ಳುತ್ತಿದ್ದಾನೆ ಎಂಬ ಆರೋಪವನ್ನು ಯಹೋದ್ಯರು ಏಸುವಿನ ಮೇಲೆ ಹೊರಿಸಿ ಅವನನ್ನು ಶಿಕ್ಷೆಗೆ ಗುರಿ ಮಾಡಿದರು. ಲಲಾತನು ಆಗಿನ ರೋಮಿಯ ಪ್ರತಿನಿಧಿ. ಅವನಿಗೆ ಏಸು ನಿರಪರಾಧಿಯೆಂದು ಕಂಡುಬಂದರೂ ಯಹೋದ್ಯರ ಬಲಾತ್ಕಾರಕ್ಕೆ ಒಳಗಾಗಿ ಏಸುವಿಗೆ ಶಿಕ್ಷೆಯನ್ನು ವಿಧಿಸ ಬೇಕಾಯಿತು. ಏಸುವನ್ನು ವಧಿಸುವುದಕ್ಕಾಗಿ ವಧ್ಯಸ್ಥಾನವಾದ ಗೊಲ್ಗೊಥಾ ಎಂಬ ಗುಡ್ಡಕ್ಕೆ ಇವನನ್ನೂ, ಇದೇ ಶಿಕ್ಷೆಗೆ ಗುರಿಯಾಗಿದ್ದ ಇಬ್ಬರು ಕಳ್ಳರನ್ನೂ ಕರೆದುಕೊಂಡು ಹೋದರು. ಮುಂದಿನ ಕಥಾಭಾಗ ಇಲ್ಲಿ ವರ್ಣಿತವಾಗಿದೆ.

**೨೫–೨೬. ಕವಿವಿಚಾರ** — ಕಾವ್ಯನಾಮ ಅಂಬಿಕಾತನಯ ದತ್ತ. ಪೂರ್ಣ ಹೆಸರು ದತ್ತಾತ್ರೇಯ ರಾಮಚಂದ್ರ ಬೇಂದ್ರೆ. ಧಾರವಾಡದವರು ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದಾರೆ. ಆಧುನಿಕ ಕನ್ನಡ ಕಾವ್ಯ ಪ್ರಪಂಚದಲ್ಲಿ ಸರ್ವಜನಾದರಣೀಯರಾದ ಕವಿಗಳು. ಪ್ರತಿಭಾ ಸಂಪನ್ನರು. ಕನ್ನಡ ನಾಡಿನಲ್ಲಿ ನವಜಾಗ್ರತಿಯನ್ನು ಉಂಟುಮಾಡಿದ ಖ್ಯಾತಿ ಇವರಿಗಿದೆ. ಇವರ ಕಾವ್ಯಶೈಲಿ ಚಿತ್ತಾಕರ್ಷಕವಾಗಿದೆ. ಅನೇಕಜನ ಕವಿಗಳು ಇವರ ಕಾವ್ಯಶೈಲಿಯ ಪ್ರಭಾವಕ್ಕೊಳಗಾಗಿ ಸಾಹಿತ್ಯಸೇವೆ ಸಲ್ಲಿಸುತ್ತಿದ್ದಾರೆ. ನಿನಾದ, ತನ್ಮಯತೆ, ಹೃದಯಸ್ಪರ್ಶತೆ, ಇವರ ಕವಿತೆಯ ಮುಖ್ಯಲಕ್ಷಣಗಳು. ಒಳ್ಳೆಯ ವಿಮರ್ಶಕರು, 'ಹರಟೆ'ಗಳ ಲೇಖಕರು, ನಾಟಕಕಾರರು .

ಗರಿ, ಕಾರು ಕಸ್ತೂರಿ, ಉಯ್ಯಾಲೆ, ನಾದಲೀಲೆ, ಸಖೀಗೀತ, ಸಾಹಿತ್ಯ ಮತ್ತು ವಿಮರ್ಶೆ, ಮೊದಲ ಮವುಗಳು ಕನ್ನಡ ನಾಡಿನ ತುಂಬ ಪ್ರಖ್ಯಾತಿ ಹೊಂದಿದ ಕೃತಿಗಳು. 'ಪಕ್ಷಿ ಹಾರುತಿದೆ' 'ನನ್ನ ಹಾಡು' ಮೊದಲಾದ ಕವನಗಳು ಸರ್ವಜನಪ್ರಿಯವಾಗಿವೆ

**೫೭ ಕವಿವಿಚಾರ**— ಕಾವ್ಯನಾಮ ವಿ. ಸೀ. ಪೂರ್ಣಹೆಸರು ವಿ. ಸೀತಾರಾ ಮಯ್ಯ. ಮೈಸೂರು ಪ್ರಾಂತದವರು. ಈಗ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡದ ಸಹಾಯಕ ಪ್ರಾಧ್ಯಾಪಕರಾಗಿದ್ದಾರೆ. ಈಗಿನ ತರುಣ ಸಾಹಿತಿಗಳಲ್ಲಿ ಹಿರಿಯರು. ಹೊಸಗನ್ನಡ ಕಾವ್ಯ ಕ್ಷೇತ್ರದಲ್ಲಿ ಎಷ್ಟೋಕಾಲದಿಂದ ದುಡಿಯುತ್ತ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಒಳ್ಳೆಯ ಭಾಷಣಕಾರರು. ಅರ್ಥಶಾಸ್ತ್ರದಲ್ಲಿಯೂ ಗಟ್ಟಿಗರು. ಗೀತೆಗಳು, ದೀಪಗಳು, ನೆಳಲುಬೆಳಕು, ಸೊಹ್ರಾಬ್‌ರುಸ್ತುಂ, ಕುರುಕ್ಷೇತ್ರ, ಮುಂತಾದ ಕವನಕೃತಿಗಳು; ಪಂಪಾಯಾತ್ರೆ, ಹರಿಪ್ರಪಂಚ, ಅಶ್ವತ್ಥಾಮನ್ (ವಿಮರ್ಶೆ) ಮುಂತಾದ ಗದ್ಯಕೃತಿಗಳು ಪ್ರಸಿದ್ಧವಾಗಿವೆ.

**೫೮. ಕವಿವಿಚಾರ**— ಕಾವ್ಯನಾಮ ಶ್ರೀನಿವಾಸ. ಪೂರ್ಣಹೆಸರು ಮಾಸ್ತಿ ವೆಂಕಟೇಶ ಅಯ್ಯಂಗಾರ್, ಮೈಸೂರು ಪ್ರಾಂತದವರು. ಮೈಸೂರು ಪ್ರಭುತ್ವದಲ್ಲಿ ಉನ್ನತ ಅಧಿಕಾರಸ್ಥಾನದಲ್ಲಿದ್ದು ಈಗ ನಿವೃತ್ತರಾಗಿದ್ದಾರೆ ಈಗ 'ಜೀವನ' ಮಾಸ ಪತ್ರಿಕೆಯ ಸಂಪಾದಕರಾಗಿದ್ದಾರೆ. ಕನ್ನಡ ಸಣ್ಣ ಕತೆಗಳ ಆದಿಪುರುಷರೆಂದು ಸುಪ್ರಸಿದ್ಧರಾಗಿದ್ದಾರೆ. ಇವರ ಕನ್ನಡದ ಗದ್ಯಶೈಲಿ ತಿಳಿಯಾಗಿದೆ. ಕನ್ನಡದಲ್ಲಿ ವಿಮರ್ಶಾಪದ್ಧತಿಯನ್ನು ಕ್ರಮಪಡಿಸಿದರು. ಕಥನಕವನಗಳನ್ನೂ, ನೀಳ್ಗವಿತೆಗಳನ್ನೂ ಬರೆಯುವುದರಲ್ಲಿ ಇವರಕೈ ತುಂಬ ಪಳಗಿದೆ. ಪ್ರತಿಭಾಶಾಲಿಗಳೂ, ರಸಿಕರೂ, ಒಳ್ಳೆಯ ಭಾಷಣಕಾರರೂ ಆಗಿದ್ದಾರೆ. ಕನ್ನಡಿಗರಲ್ಲಿ ಐಕ್ಯತೆ ಹುಟ್ಟಿಸುವ ಕಾರ್ಯದಲ್ಲಿ ತುಂಬಾ ಶ್ರಮಿಸಿದ್ದಾರೆ.

ಇವರ ಸಣ್ಣಕತೆಗಳ ಅನೇಕ ಸಂಪುಟಗಳು ಪ್ರಕಟವಾಗಿವೆ. ಅನೇಕ ನಾಟಕಗಳನ್ನೂ ರಚಿಸಿದ್ದಾರೆ. ಇವರ'ಯಶೋಧರಾ'ನಾಟಕವು ಸರಳರಗಳೆಯಲ್ಲಿ ಪ್ರಸಿದ್ಧವಾಗಿದೆ. 'ಅರುಣ' ಮೊದಲಾದ ಅನೇಕ ಕವನ ಕೃತಿಗಳನ್ನು ಪ್ರಕಾಶಗೊಳಿಸಿದ್ದಾರೆ. ಇವರ ವಿಮರ್ಶಾಗ್ರಂಥಗಳು, 'ಸುಬ್ಬಣ್ಣ' ಎಂಬ ನೀಳ್ಗತೆಯೂ, 'ಚೆನ್ನಬಸವ ನಾಯಕ' ಎಂಬ ಕಾದಂಬರಿಯೂ ಸುಪ್ರಸಿದ್ಧವಾಗಿವೆ.

**೫೯. ಕವಿವಿಚಾರ**— ಕಾವ್ಯನಾಮ "ಕುವೆಂಪು". ಪೂರ್ಣಹೆಸರು ಕೆ. ವಿ. ಪುಟ್ಟಪ್ಪ. ಮೈಸೂರು ಪ್ರಾಂತದ ಮಲೆನಾಡಿನವರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದಾರೆ. ತುಂಬಾ ಪ್ರತಿಭಾ ಸಂಪನ್ನರಾದ ಕವಿಗಳು. ಪ್ರಕೃ

ತಿಯ ಉಪಾಸಕರು. ಕನ್ನಡದಲ್ಲಿ ಸರಳರಗಳೆಯ ಛಂದಸ್ಸನ್ನು ಪ್ರಚಾರಕ್ಕೆ ತಂದವರು. ಈಗ ಮಹಾಛಂದಸ್ಸನ್ನು ಬಳಕೆಯಲ್ಲಿ ತಂದಿದ್ದಾರೆ. ಕತೆಗಾರರೂ, ನಾಟಕಕಾರರೂ, ವಿಮರ್ಶಕರೂ ಆಗಿದ್ದಾರೆ. ಇವರ 'ಯಮುನಸೋಲು' ಎಂಬುದು ಸರಳರಗಳೆಯಲ್ಲಿ ರಚಿತವಾದ ಮೊದಲ ನಾಟಕ. ರಕ್ತಾಕ್ಷಿ, ಬಿರುಗಾಳಿ, ಬಿರಲ್ಗೆಕೊರಲ್, ಚಿತ್ರಾಂಗದೆ ಮೊದಲಾದ ಸರಳರಗಳೆಯಲ್ಲಿ ಬರೆದ ನಾಟಕಗಳು ಪ್ರಖ್ಯಾತವಾಗಿವೆ. ಇವರ 'ಕಿಂದರಿಜೋಗಿ' ಎಂಬ ಕವನವು ಕನ್ನಡ ನಾಡಿನಲ್ಲಿ ಅಬಾಲವೃದ್ಧರಿಗೂ ಪ್ರಿಯವಾಗಿದೆ. 'ಮಲೆನಾಡಿನ ಚಿತ್ರಗಳು' ಎಂಬುದು ಮಲೆನಾಡಿನ ಜೀವನವನ್ನು ಚೆನ್ನಾಗಿ ಚಿತ್ರಿಸುತ್ತದೆ. ಅನೇಕ ಕವನ ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಕನ್ನಡದ ಕೆಚ್ಚು ಎದ್ದು ಕಾಣುತ್ತದೆ. ಇತ್ತೀಚಿಗೆ ಶ್ರೀರಾಮಾಯಣದರ್ಶನಂ ಎಂಬ ಮಹಾಕಾವ್ಯವನ್ನು ಮಹಾಛಂದಸ್ಸಿನಲ್ಲಿ ರಚಿಸಿದ್ದಾರೆ. ಸ್ವಾಮಿ ವಿವೇಕಾನಂದ, ಶ್ರೀ ರಾಮಕೃಷ್ಣ ಪರಮಹಂಸ, ಮೊದಲಾದ ಜೀವನ ಚರಿತ್ರೆಗಳನ್ನು ಪ್ರಕಟಿಸಿದ್ದಾರೆ. 'ಕುಮಾರವ್ಯಾಸ'ವೆಂಬ ಕವನವು, ಕುಮಾರವ್ಯಾಸನ ಕವಿತಾಶಕ್ತಿಯನ್ನು ಪ್ರಶಂಸಿಸುವ ಉತ್ತಮ ಕವನ.

**೩೦. ಸಂದರ್ಭ—** ಈ ಪದ್ಯಭಾಗವನ್ನು ಅವರ 'ರಾಮಾಯಣದರ್ಶನ'ವೆಂಬ ಮಹಾಕಾವ್ಯದಿಂದ ಆಯ್ದುಕೊಂಡಿದೆ. ಶ್ರೀರಾಮ ಸೀತೆಯರ ಜೊತೆಗೆ ಊರ್ಮಿಳೆಯ ಪತಿಯಾದ ಲಕ್ಷ್ಮಣನು ಅರಣ್ಯಕ್ಕೆ ಹೋಗಿದ್ದಾನೆ. ಲಕ್ಷ್ಮಣನು ಅರಣ್ಯಕ್ಕೆ ತೆರಳಿದಂದಿನಿಂದ ಅವನು ತಿರುಗಿ ಬರುವವರೆಗೆ ಊರ್ಮಿಳೆ ತನ್ನ ಜೀವನವನ್ನು ಹೇಗೆ ಕಳೆದಳೆಂಬುದನ್ನು ಕವಿ ಇಲ್ಲಿ ಬಹಳ ಸೊಗಸಾಗಿ ಚಿತ್ರಿಸಿದ್ದಾನೆ. ಇಲ್ಲಿ ಊರ್ಮಿಳೆಯ ಸ್ವಭಾವನಿರೂಪಣೆ ಚಿತ್ತಾಕರ್ಷಕವಾಗಿದೆ.

**೩೧. ಕವಿವಿಚಾರ— ಜಿ. ಪಿ.** ರಾಜರತ್ನಂ. ಮೈಸೂರು ಪ್ರಾಂತದವರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡದ ಅಧ್ಯಾಪಕರಾಗಿದ್ದಾರೆ. ಒಳ್ಳೆಯ ಮೇಧಾವಿಗಳೂ, ಪ್ರತಿಭಾಸಂಪನ್ನರೂ ಆದ ಕವಿಗಳು. 'ಎಂಡಕುಡುಕರತ್ನ' ಎಂಬ ಕಾವ್ಯನಾಮದಿಂದ ಬರೆದ 'ರತ್ನನ ಪದಗಳು' ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದಿದೆ. ಬೌದ್ಧ ಸಾಹಿತ್ಯವನ್ನು ಕುರಿತ ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರ 'ಗಂಡುಗೊಡಲಿ'ಎಂಬುದು ಹಳಗನ್ನಡದಲ್ಲಿ ರಚಿತವಾದ ವೀರರಸ ಪ್ರಧಾನ ನಾಟಕ. ಮಕ್ಕಳಿಗಾಗಿ ಇವರು ರಚಿಸಿದ ಶಿಶುಸಾಹಿತ್ಯವು ಕನ್ನಡ ಶಿಶುಲೋಕಕ್ಕೆ ತುಂಬ ಪ್ರಿಯವಾಗಿದೆ. ಅನೇಕ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ.

**೩೨. ಕವಿವಿಚಾರ— ಸಾಲಿ ರಾಮಚಂದ್ರರಾವ್.** ಧಾರವಾಡದವರು. ಧಾರವಾಡದ ಕರ್ನಾಟಕ ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದರು. ಈಗ ನಿವೃತ್ತರಾಗಿದ್ದಾರೆ. ಪ್ರಾಚೀನ ನವೀನ ಕಾವ್ಯ ಪದ್ಧತಿಯನ್ನು ಅನುಸರಿಸಿ ಬರೆವಲ್ಲಿ ಬಹಳ ನುರಿತಿದ್ದಾರೆ.

ಪ್ರತಿಭಾಸಂಪನ್ನ ಕವಿಗಳು. ಪಂಡಿತರು. ಇವರ 'ಚಿತ್ರಸೃಷ್ಟಿ' ಎಂಬ ಕವನಸಂಗ್ರಹವು ಪ್ರಸಿದ್ಧವಾಗಿದೆ. ಇವರ 'ಶ್ರೀರಾಮಾಯಣವು' ಜನಪ್ರಿಯ-ವಾಗಿದೆ.

**೬೩. ಕವಿವಿಚಾರ**— ಕಾವ್ಯನಾಮ 'ಮಧುರ ಚೆನ್ನ.' ಪೂರ್ಣ ಹೆಸರು ಚೆನ್ನಮಲ್ಲಪ್ಪ ಹಲಸಂಗಿ. ಸ್ಥಳ-ವಿಜಾಪುರ ಜಿಲ್ಲೆಯ ಹಲಸಂಗಿ. ಬಾಲ್ಯದಿಂದಲೂ ಇವರು ಅಧ್ಯಾತ್ಮಜೀವಿಗಳು. ಅಧ್ಯಾತ್ಮಸಾಧನೆಗಾಗಿ ಯೋಗಮಾರ್ಗವನ್ನು ಅವಲಂಬಿಸಿದ್ದಾರೆ. ಅವರಲ್ಲಿ ಸಾಧನೆಮಾಡುತ್ತಿದ್ದಾರೆ.

ಇವರ ಕೃತಿಗಳಲ್ಲಿ ಅಧ್ಯಾತ್ಮದ ಅನುಭವವು ಪದೇ ಪದೇ ನಾನಾ ರೂಪದಲ್ಲಿ ಅಭಿವ್ಯಕ್ತವಾಗಿದೆ. ಅಧ್ಯಾತ್ಮವಿಚಾರಗಳನ್ನು ಸುಲಭವಾದ, ಸರಳವಾದ ಶೈಲಿಯಲ್ಲಿ ಬರೆಯುತ್ತಾರೆ. ಇವರು ಕೆಲವು ಕಾಲ "ಅರವಿಂದ ಗ್ರಂಥಮಾಲೆ"ಯನ್ನು ನಡೆಸಿದರು. ಅರವಿಂದರ ತತ್ತ್ವಗಳನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡು ಅದೇ ದೆಸೆಯಲ್ಲಿ ಸಾಧನೆ ಮಾಡುತ್ತಿದ್ದಾರೆ.

ಇವರ ಕಾಳರಾತ್ರಿ, ಪೂರ್ವರಂಗ, ಬೆಳಗು ಮುಂದಾದ ಕೃತಿಗಳು ಸ್ವಾನುಭವಯುಕ್ತವಾದ ವಿಚಾರಗಳಿಂದ ಕೂಡಿದುವುಗಳು. 'ನನ್ನ ನಲ್ಲ' ಎಂಬ ಇವರ ಕವನ ತಾವು ವಿವಿಧರೀತಿಯಲ್ಲಿ ಕಂಡ ಪರಮಾತ್ಮನಿಗೂ ಜೀವನಿಗೂ ಇರುವ ಸಂಬಂಧವನ್ನು ಮನೋಹರವಾಗಿ ಚಿತ್ರಿಸುತ್ತದೆ. ಇಲ್ಲಿನ ಪದ್ಯಗಳನ್ನು 'ನನ್ನ ನಲ್ಲ' ಎಂಬುದರ ಮೂರನೆಯ ಎಸಳಿನಿಂದ ಆಯ್ದುಕೊಂಡಿದೆ. ಈ ಪದ್ಯಗಳಲ್ಲಿ ಪರಮಾತ್ಮನನ್ನು ಕಾಣಬೇಕೆಂಬ ಹಂಬಲು ಸತಿ ವಿರಹದಿಂದ ಪರಿತಪಿಸುತ್ತ ತನ್ನ ಪತಿಯನ್ನು ಕಾಣಬೇಕೆಂದು ಹಂಬಲಿಸುವ ರೀತಿಯಲ್ಲಿ ವರ್ಣಿತವಾಗಿದೆ.

**೬೪. ಕವಿವಿಚಾರ**— ಡಿ. ಕೆ. ಭೀಮಸೇನರಾವ್. ಹೈದರಾಬಾದು ಪ್ರಾಂತದ ರಾಯಚೂರು ಜಿಲ್ಲೆಯವರು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದಾರೆ.

**೬೫. ಕವಿವಿಚಾರ**— ಕಾವ್ಯನಾಮ 'ಮಾನ್ವಿ'. ಪೂರ್ಣಹೆಸರು ಮಾನ್ವಿ ನರಸಿಂಗರಾವ್. ಹೈದರಾಬಾದು ಪ್ರಾಂತದ ರಾಯಚೂರು ಜಿಲ್ಲೆಯವರು. ಮೈಸೂರು ವಿಶ್ವವಿದ್ಯಾಲಯದ ಕನ್ನಡದ ಎಮ್. ಎ. ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿ ಸ್ವರ್ಣಪದಕವನ್ನು ಬಹುಮಾನವಾಗಿ ಪಡೆದಿದ್ದಾರೆ. ಅನೇಕ ಲೇಖನಗಳನ್ನೂ ಕವನಗಳನ್ನೂ ರಚಿಸಿ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. 'ಕನ್ನಡಯಾತ್ರೆ' ಎಂಬ ಇವರ ಪುಸ್ತಕವನ್ನು ಹೈದರಾಬಾದಿನ ಕರ್ನಾಟಕ ಸಾಹಿತ್ಯ ಮಂದಿರವು ಪ್ರಕಟಿಸಿದೆ.